# ಹೃದಯ ವೀಣೆ

ಅಡಿಬಾಯಿ ರಾಮಣ್ಣ ಶೆಟ್ಟಿ,
ಧರ್ಮಸ್ಥಳ.



1950

ಉದಯ. ಕಿರಣ ೧.

# ಹೃದಯ ವೀಣೆ

ರಾಷ್ಟ್ರಕವಿ ಶ್ರೀ ಗೋವಿಂದ ಪೈಗಳವರ ಮುನ್ನುಡಿ



ಅಡಿಬಾಯಿ ರಾಮಣ್ಣ ಶೆಟ್ಟಿ.
ಧರ್ಮಸ್ಥಳ.

ಬೆಲೆ: ೧—೦—೦.

# ಮುನ್ನುಡಿ



ಮನೆಯ ಮಗಳಿಗೆ ಮದುವೆಯಾಗದ ಮುಂಚೆ ಯಾರಾದರೂ ಸುಮಂಗಲಿಯರು ಬೇಕೆಂದರೆ, ಆಕೆ ಅವರ ಸೊಡರು ಹತ್ತಿಸಲಿಕ್ಕೆ ಹಣತೆಯ ಬೆಳಕನ್ನೊ, ಅವರಿಗೆ ಮೆಲುವುದಕ್ಕೆ ಕಬ್ಬಿನ ಹೋಳನ್ನೊ, ಪದಾರ್ಥಕ್ಕೆ ತೆಂಗಿನ ಕಾಯಿಯನ್ನೊ, ಜಗಿಯಲಿಕ್ಕೆ ಎಲೆಅಡಿಕೆಯನ್ನೊ, ಮುಡಿಯಲಿಕ್ಕೆ ಹೊಂಬಾಳೆಯನ್ನೊ, ಬಾಚಲಿಕ್ಕೆ ಸೀರಣಿಗೆಯನ್ನೊ, ತೊಡಲಿಕ್ಕೆ ಗಾಜಿನ ಬಳೆಗಳನ್ನೊ ಕೆಯ್ಯೆತ್ತಿ ಕೊಡುತ್ತಿರಬಹುದು. ಆ ಒಡವೆಗಳನ್ನೆಲ್ಲ ಮೊತ್ತಯಿಸಿ ಬಾಗಿನವೆಂದು ಅವರಿಗೆ ನೀಡುವುದಾದರೆ, ಆಕೆಗೆ ಮದುವೆಯಾದ ಮೇಲಣ ಗೌರೀ ಹಬ್ಬದಲ್ಲಿ ಮನೆಯ ಮುತ್ತಯ್ದೆ ಆಕೆಯಿಂದ ಆ ಬಾಗಿನವನ್ನು ಅವರಿಗೆ ಕೊಡಿಸುವಂದು. ಏವಂ ಚ ಲೋಕರೂಢಿ ಇತ್ಥಂವಿಧವಾಗಿದೆ. ಹಾಗೆ ಈಮುಂಚೆ ಶ್ರೀ ರಾಮಣ್ಣ ಶೆಟ್ಟಿಯವರು ತಮ್ಮ ಕವಿತೆಗಳಲ್ಲಿ ಕೆಲವನ್ನೊ ಹಲವನ್ನೊ ಒಂದೊಂದಾಗಿ ಆಯಾ ಪತ್ರಿಕೆಗಳಿಗೆ ಕಳಿಸಿಕೊಟ್ಟಿರಬಹುದು; ಆದರೆ ಈ ವರೆಗೆ ರಚಿಸಿರುವ ಅವೆಲ್ಲವನ್ನು ಕಲೆಹಾಕಿ ಗ್ರಂಥರೂಪದಲ್ಲಿ ಪ್ರಕಟಿಸಿರುವರೆಂದರೆ ಇದೇ ಮೊದಲ ಬಾರಿ. ಅವನ್ನೀಗ ಕನ್ನಡ ನಾಡಿಗೆ ಈಯುವಲ್ಲಿ ಅವರಿಗೆ ಜತೆಗೊಬ್ಬ ಮುತ್ತಯ್ದೆ ಬೇಕಾಗಿ, ಆ ಕೊರತೆಯನ್ನು ತೀರಲೆಂದು ಅವರು ನನ್ನ ನೆರವನ್ನು ಕೋರಿದರು. ಒಪ್ಪಿಕೊಂಡೆ. ಇಲ್ಲೀಗ ಆ ಆಚಾರವನ್ನು ಸಜಾತೀಯವಾದ ಕವಿಧರ್ಮದಿಂದ ಮನವಾರೆ ಸಲ್ಲಿಸುತ್ತೇನೆ.

ಯುಗಾದಿಯಂದು ಬಡಿಸಿದ ಎಲೆಗೆ ಕೆಯ್ಯಿಕ್ಕುವ ಮುಂಚೆ ಬೇವನ್ನು ನಂಜಬೇಕಾದಂತೆ, ಈ ಗ್ರಂಥವನ್ನು ಕುರಿತು ಮೊತ್ತಮೊದಲಲ್ಲಿ ಇದೊಂದು ಅಪ್ದ ಮಾತನ್ನು ಆಡಬೇಕಾಗಿದೆ. ಅದೇನೆಂದರೆ, ಈ ಕವಿತೆಗಳಲ್ಲಿ ಹಲವೆಡೆ ಶಬ್ದಾಂತಗಳಲ್ಲಿ ದೀರ್ಘದ ಅಪಪ್ರಯೋಗವೇ ಮೊದಲಾದ ಅಕ್ಷರಿಕೆಯ (spelling) ತೊಡಕುಗಳೂ, ಅಪಪ್ರಸ್ತಾರದ ಎಡಹುಗಳೂ ಇವೆ. ಇವೆಲ್ಲವೂ ಅಚ್ಚಿನ ಹುಳುಕುಗಳೇ ಅಲ್ಲ, ಕೆಲವು ರಚಕರ ಅಜ್ಞಾನದಿಂದಲ್ಲ, ಅನವೇಕ್ಷೆಯಿಂದ ಆಗಿರಬೇಕು. ಹೇಗಿದ್ದರೂ ಇಷ್ಟು ಚಲೋದಾಗಿ ಮಿಾಟುತ್ತಿರುವ ವೀಣೆಯ ಮನೋಹರವಾದ ಸ್ವರಗಳನ್ನು ಈ ಅಪಸ್ವರಗಳು ಅಂದಗೆಡಿಸದಂತೆ, ಒಂದನ್ನೂ ಉಳಿಯಗೊಡದೆ ಮುಂದಣ ಆವೃತ್ತಿಯಲ್ಲಿ ಅವನ್ನೆಲ್ಲ ಕೂಲಂಕಷವಾಗಿ ತಿದ್ದಿದರೆ ಲೇಸು. ಇದಾದರೆ ಸೂತ ಉವಾಚ ಎಂದು ಒಂದು ಸೂಚನೆ ತಾನೆ ವಿನಾ ಸುತರಾಂ ಛಿದ್ರಾನ್ವೇಷಣವಲ್ಲ.

ಈ ಕವಿತೆಗಳೆಲ್ಲವೂ ಸೊಗಸಾಗಿವೆ, ಹೃದಯಂಗಮವಾಗಿವೆ. ಇವಲ್ಲಿ ಕವಿಯ ಹೃದಯವೀಣೆ ಧಾರಾಳವಾಗಿ ಮಿಡಿಯುತ್ತದೆ, ಸಜೀವವಾಗಿ ನುಡಿಯುತ್ತದೆ. ಅದರ ನಿಪುಣವಾದ ಜಾಜನೆ ಮುಂದಣ ಅಭಿವೃದ್ಧಿಯ ಕಡೆಗೆ ತೂಗುತ್ತದೆ, ಅದರ ಸುಸ್ವರಗಳ ಭಾವನೆ ಭಕ್ತಿಯ ಹಾಗೂ ಅನು ಭಾವಿಕತೆಯ ದಾರಿಯಲ್ಲಿ ಸಾಗುತ್ತದೆ. ಇವು ಓದುಗರೆಲ್ಲರಿಗೆ ಏಕಪ್ರಕಾರ ವಾಗಿ ಸುಖಾವಹವಾಗಿವೆ, ನಡುವಣ ಹಾಗೂ ಮೇಲಣ ತರಗತಿಗಳ ಮಕ್ಕಳ ಅಭ್ಯಾಸಕ್ಕಂತೂ ಬಹಳ ಹಿತಾವಹವಾಗಿವೆ. ಈಬಗ್ಗೆ ಶ್ರೀ ಶೆಟ್ಟಿ ಯವರನ್ನು ತುಂಬಾ ಅಭಿನಂದಿಸುತ್ತೇನೆ.

ಈ ಸಂಗ್ರಹದ ನಲವತ್ತು ಚಿಲ್ಲರೆ ಕವಿತೆಗಳಲ್ಲಿ ಊಚುನೀರಿನವೆಂದು ತೋರುವ ಈ ಕೆಲವು—(೧) ಕಾವ್ಯಾಂಗನೆ (ನಂ ೨), (೨) ಸುರಚಾಪ (ನಂ. ೬.) (೩) ಸಾಗುತಿರುವುದು ಎಲ್ಲಿಗೆ? (ನಂ ೨೦.), (೪) ನಿನ್ನನರ್ಚಿ ಸುವುದೆಂತು?(ನಂ. ೨೨), (೫) ಮನಸು (ನಂ. ೨೩), (೬) ವಿಸಾರೆಯ ಮೊರೆ (ನಂ. ೨೯), (೭) ನುಗ್ಗು ನಡೆ ಮುಂದೆ (ನಂ. ೩೪), (೮) ಸಿಧಿ (ನಂ ೩೫) ಮತ್ತು (೯) ನನ್ನ ಜೀವನಯಾತ್ರೆ (ನಂ. ೩೦)—ಹಾಲ ಉರುಳಿಯಲ್ಲಿ ತೇಲುವ ಕೆನೆಯಂತಿವೆ. ಉರುಳಿಯಲ್ಲಿ ಇದ್ದ ಹಾಲಷ್ಟೂ ಕೆನೆಗಟ್ಟಿದಷ್ಟೇ.

ಇವುಗಳಲ್ಲಿ 'ಕಾವ್ಯಾಂಗನೆ'ಯ ಚಿತ್ರಣ ಕಣ್ಣುಕಟ್ಟುವಂತಿದೆ; 'ಸುರ ಚಾಪ'ದಲ್ಲಿ ರಸಋಷಿಯ ಹೃದಯದ ಪ್ರಭೆ ಮನಸ್ಸಿನ ಮುಂದೆ ಒಡ ಮೂಡುತ್ತದೆ; 'ಸಾಗುತಿರುವುದು ಎಲ್ಲಿಗೆ" ಎಂದು ಮುಂದೆ ಸಾಗುತ್ತ ಲಿದ್ದರೆ, 'ಸಾಗುತಿಹೆವು ಬೆಳಕಿಗೆ!' ಎನ್ನುತ್ತಿದೆ ಪ್ರತಿಧ್ವನಿ; 'ನಿನ್ನನರ್ಚಿಸುವು ದೆಂತು?' ಎಂದು ಅಂಗಲಾಚುತ್ತ ಪ್ರತ್ಯುತ್ತರಕ್ಕೆ ಕಿವಿ ನಿಗುರಿಸಿದರೆ, ಸನ್ಯಾ ಸವೂ ಬೇಡ, ದೇಗುಲಗಳೂ ಬೇಡ, ಸುನಿಶ್ಚಯವಾಗಿ ಮನಸಾರೆ ಸುಗುಣಿ ಯಾದಿ ಎಂದರೆ ನನ್ನನ್ನು ಅರ್ಚಿಸುತ್ತೀ ಎನ್ನುತ್ತಾನೆ ದೇವ; 'ಮನಸಿ'ನಲ್ಲಿ ಅದರ ಭ್ರಮಣವನ್ನು ಸೊಗಸಾಗಿ ಬಣ್ಣಿಸುವಲ್ಲಿ 'ಆಸೆ ಮನಸು ದಂಪತಿ ಗಳು' ಎಂಬ ಅದೊಂದು ಚಲೋ ರೂಪಕವನ್ನು ಹೂಣಿಸಿದೆ; 'ವಿಸಾರೆಯ ಮೊರೆ'ಯಲ್ಲಿ ನಾನು ಮಾತ್ರ ನಿನಗಾಗಿ ವಿರಹಿಣಿಯಲ್ಲ, ನೀನೂ ನನಗಾಗಿ ವಿರಹಿಯಾಗಿರುತ್ತಿ ಎನ್ನುವ ಸಂತವಣೆ ಇದೆ; 'ನುಗ್ಗು ನಡೆ ಮುಂದೆ'ಯಲ್ಲಿ ಇಂದಿನ ದುರವಸ್ಥೆಯನ್ನು ಮಾಣಿಸಲಿಕ್ಕೆ ಅದರ ಮೇಲೆ ಕೆಯ್ಮಾಡಿಯೇ ಶುದ್ಧ ಎಂದು ರಣಕರೆತವಿದೆ; 'ಸಿಧಿ'ಯಲ್ಲಿ ಈ ಕೆಲವು ಆಳವಾದ ಭಾವನೆ ಗಳಿವೆ—

ಕ್ರಾಂತಿ ಶಾಂತಿಗಳೆಂದು ದುಗಡ ಸಂತಸವೇಕೆ?
ಶಾಂತಿಮುಗಿಲಿನೊಳಿಹುದು ಕ್ರಾಂತಿ ಸಿಡಿಲು;

ಮಳೆಸುರಿವ ಮುಗಿಲಿರಲಿ, ಸಿಡಿಲು ಬೇಡೆನುವಂತೆ,
ಕ್ರಾಂತಿಯಿಲ್ಲದ ಶಾಂತಿಯಿಲ್ಲ ಪರಿಕಿಸಲು ॥ ೧೭ ॥
ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರೆಂಬುದು ನಾಲ್ಕು
ವರ್ಣಗಳು ಋಷಿ ವೈದಿಕರ ಕಾಲದಲ್ಲಿ;
ಪತಿತ, ಪಾವನ, ಧನಿಕ, ಬಡವರೆಂಬುದು ನಾಲ್ಕು
ವರ್ಣಗಳು ನಮ್ಮ ಈ ಕಾಲದಲ್ಲಿ ॥ ೨೧ ॥
ಸಂಸಾರದಲಿ ಹೆಣ್ಣು ಪ್ರೇಮವೃಕ್ಷದ ಬಿತ್ತು,
ಕಾಮುಕರ ತುತ್ತಾಗಿ ಬದುಕಬೇಕೇ? ॥ ೨೨ ॥

ಕೊನೆಗೆ 'ನನ್ನ ಜೀವಯಾತ್ರೆ'ಯಲ್ಲಿ ಇವರು ತಮ್ಮ ಚಿಕ್ಕಂದಿನಿಂದ ಮುಂದಣ ಬೆಳವಿಯನ್ನು ನಿಷ್ಕಪಟದಿಂದ ಇಷ್ಟು ಸರಳವಾಗಿ ಚಿತ್ರಿಸಿರುವುದು ತುಂಬ ಸುಭಗವಾಗಿದೆ. ಅದರಲ್ಲಿ ತಮ್ಮ ಹಿರಿಯರ ಯಾವ ಗುಣವನ್ನೂ (ಉದಾ. ಪದ್ಯ ೧೬, ೧೭) ಯಾವ ಅವಗುಣವನ್ನೂ (ಉದಾ. ಪದ್ಯ ೧೨, ೨೩) ಹೇಳದೆ ಬಿಟ್ಟಿಲ್ಲ. ಅಲ್ಲಿಯ

ಓದಿದವರೊಡನಾಡಿ ಬೆಳೆದು ಬಾಳದ ತೆರದಿ
ಗೈದ ದುರ್ವಿಧಿಗೆ ಮನೆ ಮರುಗುತಿಹುದು ॥ ೧೧ ॥
ಹತ್ತಾರು ಮಕ್ಕಳೊಡನಾಡಿ ಬೆಳೆದಿಹ ಬಾಲ್ಯ
ಬರುವುದೇನಿನ್ನೊಮ್ಮೆ ಬೇಕುಬೇಕೆನಲು? ॥ ೧೩ ॥
ಜೀವನದೊಳೊಂದು ದಿನವಾದರೂ ನಾ ದುಡಿದು
ನಾನೇ ಸ್ವತಂತ್ರ ಬದುಕುವ ಕಾಲವಿಹುದೆ? ॥ ೪೩ ॥
ಜೀವನದಿ ಬಹುಜನರ ಪ್ರೀತಿ ಋಣ ಪಡೆದಿಹೆನು,
ಸಹವಾಸದಲಿ ಮನಸು ಬೆಳಗಿರುವುದು;
ಋಣವೆಲ್ಲ ಪರಿಹರಿಸದೆಯೆ ಬಾಳು ಮುಗಿಯುವುದೆ?
ಹಾಗಾಗದಿರಲೆಂದು ಹೃದಯ ಬಯಸುವುದು ॥ ೪೮ ॥

ಎಂಬ ಪದ್ಯಗಳನ್ನು ಓದುವಾಗ, ಇನ್ನು ಸರ್ವಥಾ ಮರಳದಂತೆ ನೆನಪಿನ ಪಾಲಾಗಿ ಹೋದ ಆ ಗತಕಾಲವು ಮನಸಿಗೆ ಹೊಳಕುತ್ತಲೆ ಕಣ್ಣಿನಲ್ಲಿ ನೀರೂರಬೇಕು. ಅದರಲ್ಲಿಯ ಗೃಹಣೀಯವಾದ ಈ ಕೆಲವು ಮಾತುಗಳೂ—

ಓದುಬರಹಗಳಿಂದ ಮಾನವತೆಯರಳುವುದೆ?
ಓದಿಲ್ಲದಿರಲು ನಿಸ್ತೇಜವಾಗುವುದೆ?
ಮನಸು ಕರ್ಮಗಳು ಸತ್ಪಥದೆ ಸಾಗಲು ಬಾಳು
ಹಸನಾಗುವುದು . . . . . . . . . . . ॥ ೫ ॥
ಬಡತನವೊ ಸಂಪತ್ತೊ ಯಾವುದಾದರು ಇರಲಿ,
ಮನೆತುಂಬ ಮಂದಿಯೊಂದಾಗಿ ಪ್ರೀತಿಯಲಿ
ಬಾಳಲದು ಮಾನವನ ಜೀವನವು ಎನಬಹುದು;
ಸತಿಪತಿಯರೇ ಬೇರೆ ಇರಲು ಸೊಗವೆಲ್ಲಿ? ॥ ೧೮ ॥

ಹೃದಯಪರಿಪಾಕವೇ ಗುರುವೆಂದು ನೆಚ್ಚು! ॥ ೨೫ ॥<br>
ನಾಡು ನುಡಿ. ಜಾತಿ, ಮತ, ಧರ್ಮ ಭೇದಗಳೇಕೆ?<br>
ಭರತಾತ್ಮಜರು ಮಾನವರು ಒಂದೆ ಜಾತಿ ॥ ೩೩ ॥<br>
ನುಡಿದಂತೆ ನಡೆವ ಜನರಿಲ್ಲದಿಹ ಜೀವನದಿ<br>
ಒಡನಾಟ ಕಡುಕಷ್ಟ . . . . . ॥ ೪೨ ॥

ಅವುಗಳಂತೆಯೇ ಇತರ ಕವಿತೆಗಳಲ್ಲಿಯ ಸ್ಪೃಹಣೀಯವಾದ ಈ ಇನ್ನೂ ಕೆಲವು ಮಾತುಗಳೂ —

(೧) ವಿಶ್ವಸಂಚಾಲಕನು ಸೃಷ್ಟಿ ಚಕ್ರದಿ ನಿನ್ನ (ಅಂದರೆ ಧರ್ಮವನ್ನು)<br>
ನಡುಗೀಲಿನಂತೆ ಸಂಯೋಜಿಸಿಹನಿದು ದಿಟವು (ಪು ೫);

(೨) ಹಗಲಿಗಿಂತಲು ಮಿಗಿಲೆ? ಎನ್ನಿಸಿತು ಇರುಳು (ಪು. ೨೩);

(೩) ತನು ಮಿಗಳಿವಾದೊಡೇನುಳಿವ ಸವಿ ನೆನಹ. ಚಿರ (ಪು. ೩೦);

(೪) ರಾಮದೂತನ ಭಕ್ತಿ ನಿನಗಿರಲು, ಜೀವನವೆ<br>
ರಾಮಾಯಣವು! ಇದಕೆ ಸಂದೇಹವೇನು? (ಪು ೫೨);

(೫) ಗುರು ತನ್ನ ಶಿಷ್ಯರನು ಭಿಕ್ಷೆಗೆನ್ನುತ ಕಳುಹಿ<br>
ದಂತೆಮ್ಮ ತಿರಿದು ತರುವಂತೆ ಹೇಳಿ.<br>
ಮನದ ಕಂತೆಯನಿತ್ತು ಕತ್ತಲೆಯ ಈ ಜಗಕೆ<br>
ವಿಧಿಯು ಕಳುಹಿದನು ನಿಷ್ಕರುಣೆಯಲ್ಲಿ (ಪು ೬೦).

(೬) ಮನವೇ ಮನುಜತನಕೆ ಮೂಲ (ಪು ೬೮)

(೭) ಅತಿಯಾಗಲಿ, ಮಿತಿಮೀರಲಿ,<br>
ಅಧಿಕಾರದ ಬಲುಮೊಯಲಿ<br>
ಆಗಲಿ ಬಲು ಧಾಳಿ,<br>
ಅದನೆಲ್ಲನ ಸಿಗಿಬಗಿದು<br>
ಬರುವಳು ನಗೆಯಲಿ ನಲಿದು<br>
ಕ್ರಾಂತಿಯ ಕಾಳಿ (ಪು. ೭೨)

ಮನೆಯ ಸೂರುಗಳಲ್ಲಿ ಗೂಡುಮಾಡಿರುವ ಗುಬ್ಬಿಗಳಂತೆ, ಅವನ್ನು ಓದಿದವರ ನೆನವಿನಲ್ಲಿ ಬಹುಕಾಲ ಕಿಲಿಬಿಲಿಸುವವಲ್ಲದೆ, ಅಲ್ಲಿಂದ ಮತ್ತೆ ಬೇಗನೆ ಹಾರಿಹೋಗವು

ಶ್ರೀ ರಾಮಣ್ಣ ಶೆಟ್ಟಿಯವರು ಇನ್ನೂ ನಡುವಯಸ್ಸನ್ನು ದಾಟಿಲ್ಲ ಅವರ ಜೀವನಮಾನದಲ್ಲಿ ಇನ್ನೂ ನೇಸರು ನೆತ್ತಿಗೆ ಬಂದಿಲ್ಲ. ಅವರ ಮುಂದೆ ಭವಿಷ್ಯ ಉದ್ದವಾಗಿ ಚಾಚಿದೆ — ಶ್ರೀ ದೇವರು ಅದನ್ನು ಮತ್ತೂ ಉದ್ದ ಬೆಳಸಲಿ! ಇವರಿಗೆ ಕಾವ್ಯವನ್ನು ರಚಿಸುತ್ತಿರಬೇಕೆಂಬ, ಸಾಹಿತ್ಯವನ್ನು ಸೃಷ್ಟಿಸುತ್ತಿರಬೇಕೆಂಬ ಆತುರವೂ ಇದೆ, ಉತ್ಸಾಹವೂ ಇದೆ, ಆ ತಕ್ಕ ಭಾವನಾಶಕ್ತಿಯೂ ಮೇಧಾಶಕ್ತಿಯೂ ಇವೆ. ಶ್ರೀ ದೇವರು ಅವನ್ನು ಅಭಿವೃದ್ಧಿಸಿ, ಅವರಿನ್ನು ಇತೋಽತಿಶಯವಾದ ಅನೇಕ ಕವಿತೆಗಳನ್ನು ಬರೆವಂತೆ ಅವರನ್ನು ಅನುಗ್ರಹಿಸಿ ಹರಸಲಿ ಎಂದು ಹಾರಯಿಸುತ್ತೇನೆ. ಇತಿ ಶಮ್.

ಗೋವಿಂದ ಪೈ.

## ಅರಿಕೆ

ಈ ನನ್ನ ಪ್ರಥಮ ಪ್ರಯತ್ನದ ಫಲವಾದ ಕವಿತಾ ಸಂಗ್ರಹವು ಬೆಳಕಿಗೆ ಬರುವಾಗ ಈ ಮೂಲಕವಾಗಿ ನಾನು ನನ್ನ ನಾಡಿನ ಹಿರಿಯರ ಮುಂದೆ ಕಾಣಿಸಿಕೊಳ್ಳುತ್ತಿದ್ದೇನೆ. ಇದರಲ್ಲಿನ ಕವಿತೆಗಳಂತೆಯೇ ಈ ಬಯಕೆಯೂ ಹಳೆಯದು. ಹಳೆಯ ಬಯಕೆಗೆ ಕಾರಣರಾದ ಕನ್ನಡದ ಹಿರಿಯ ಕವಿಗಳಿಗೆಲ್ಲರಿಗೂ ಭಕ್ತಿಯಿಂದ ತಲೆಬಾಗುವೆನು.

ನನ್ನ ಕವಿತೆಗಳ ಹಸ್ತಪ್ರತಿಯನ್ನು ಓದಿನೋಡಿ ನನ್ನನ್ನು ಪ್ರೋತ್ಸಾಹಿಸಿ ಇದನ್ನು ಪ್ರಕಟಿಸುವ ವೆಚ್ಚದ ಭಾರವನ್ನು ಹೊರುವುದರಲ್ಲಿ ಹೆಗಲು ಕೊಟ್ಟು ಹೃತ್ಪೂರ್ವಕವಾಗಿ ಸಹಕರಿಸಿದ ನನ್ನ ಪ್ರಿಯ ಬಂಧು ಶ್ರೀ ಅಗ್ರಾಳ ಪುರಂದರ ರೈ, ಪುಣಚ, ಅವರಿಗೆ ನಾನು ಚಿರಋಣಿಯು.

ಅಚ್ಚಾಗುತಿದ್ದಾಗ ನನಗೆ ಸಹಕರಿಸಿದ ಶ್ರೀ. ಪಿ. ಕೆ. ನಾರಾಯಣ ವಿದ್ವಾನ್, ಮಂಗಳೂರು ಅವರ ಸಹಾಯವು ಅಮೂಲ್ಯವಾದುದು.

ನಾನು ಈ ನನ್ನ ಮಣ್ಣಿನ ಗುಡಿಯಂತಹ ಕವಿತಾ ಸಂಗ್ರಹಕ್ಕೆ ಮುನ್ನುಡಿಯನ್ನು ಬಯಸಿ ಶ್ರೀ ರಾಷ್ಟ್ರಕವಿ ಗೋವಿಂದ ಪೈಗಳವರನ್ನು ಪ್ರಾರ್ಥಿಸಿದಾಗ, ವಿಶಾಲವಾದ ಸಹೃದಯವುಳ್ಳ ಅವರು ಚಿನ್ನದ ಕಲಶದಂತಹ ಮುನ್ನುಡಿಯನ್ನೇ ಬರೆದುಕೊಟ್ಟು ಪ್ರೋತ್ಸಾಹಿಸಿದುದಕ್ಕಾಗಿ ನಾನು ಅವರಿಗೆ ಸದಾ ಕೃತಜ್ಞನು.

ಇದರಲ್ಲಿನ ಕವಿತೆಗಳಲ್ಲಿ ಕೆಲವನ್ನು ಈ ಮೊದಲೇ ತಮ್ಮ ಪತ್ರಿಕೆಗಳಲ್ಲಿ ಪ್ರಕಟಿಸಿದ ಕಲಾ, ಕಲಾವಿದ, ಸರ್ವೋದಯ, ನವಭಾರತ, ಶ್ರೀಕೃಷ್ಣ ಸೂಕ್ತಿ, ಪ್ರಪಂಚ, ಅರುಣ, ಪತ್ರಿಕೆಗಳ ಸಂಪಾದಕರನ್ನು ಅಭಿನಂದಿಸುವೆನು.

ಆದಷ್ಟು ಬೇಗನೇ ಸಾಧ್ಯವಾದಷ್ಟು ಅಂದವಾಗಿ ಮುದ್ರಿಸಿಕೊಟ್ಟುದಕ್ಕಾಗಿ ಕೆನರಾ ಪ್ರೆಸ್ಸಿನ ಒಡೆಯರಿಗೆ ವಂದಿಸುತ್ತೇನೆ.

ಪ್ರಮಾದವಶಾತ್ ಮುದ್ರಣದೋಷಗಳಿರುವುದರಿಂದ ವಾಚಕರು ಶುದ್ಧಾಶುದ್ಧ ಪತ್ರಿಕೆಯನ್ನು ಗಮನಿಸಬೇಕಾಗಿ ಪ್ರಾರ್ಥಿಸುತ್ತೇನೆ. ಕನ್ನಡ ನಾಡಿನ ಎಲ್ಲ ಹಿರಿಯರೂ ಇದರ ತಪ್ಪುಗಳನ್ನು ಸೂಚಿಸಿ, ಕಿರಿಯರು ಆದರದಿಂದ ಓದಿ ಸಹಕರಿಸಿದರೆ ಇನ್ನೂ ಇಂತಹ 'ಅಳಿಲು ಸೇವೆ' ನಡೆಯುವಂತಾಗಬಹುದೆಂದು ಎಲ್ಲರಲ್ಲಿಯೂ ಸವಿನಯವಾಗಿ ವಿನಂತಿಸುತ್ತೇನೆ.

ಸಹೃದಯರ ಶರಣ,

**ಅಡಿಬಾಯಿ ರಾಮಣ್ಣ ಶೆಟ್ಟಿ.**

ಧರ್ಮಸ್ಥಳ, ದ. ಕ.

# ಪರಿವಿಡಿ



**ಶ್ರೀ ಧರ್ಮಸ್ಥಳ ಮಂಜಯ್ಯ ಹೆಗ್ಗಡೆಯವರು,** ಎಂ. ಎಲ್. ಸಿ.

ನನ್ನ **ಪೋಷಕರ** ಷಷ್ಠ್ಯಬ್ಧಿಯಾ ಸವಿನೆನಹಿ
ಗಾಗಿ ಅರ್ಪಿಸುವೆನವರಡಿದಾವರೆಯಲೀ ॥
ವೀಣೆ-ವೈಣಿಕರೆಂತೊ? ರಸಿಕರುಸುರಲಿ; ನನ್ನ
ಭಕ್ತಿಯಿದು; ನಿರತವೂ ಆನಂದವಿರಲೀ ॥

---

......................................ಜಗದಿ
ಪುಟ್ಟಿದವರಿಗೆ ಮನದ ಬಯಕೆ ಪಿರಿದೆಂದು
ಮನ್ನಿಪುದಿದಂ ಸರ್ವಜನರು ॥

—ಶ್ರೀರಾಮಪಟ್ಟಾಭಿಷೇಕ, ಮಹಾಲಕ್ಷ್ಮಿ.

ಮಂದಃ ಕವಿಯಶಃಪ್ರಾರ್ಥೀಗರ್ಮಿಷ್ಯಾಮ್ಯುಪಹಾಸ್ಯತಾಮ್ ।
ಪ್ರಾಂಶು ಲಭ್ಯೇ ಫಲೇ ಲೋಭಾದುದ್ಬಾಹುರಿವ ವಾಮನಃ ॥

— ಮಹಾಕವಿ ಕಾಳಿದಾಸ.

ಮಳೆಗರೆವ ಮುಗಿಲು, ಕುಸುಮಿಸುವ ಲತೆ, ನರ್ತಿಸುವ
ನವಿಲು, ಹೊನಲಾಗಿ ಹರಿಯುವ ಕಿರಿಯ ಬುಗ್ಗೆ
ಹೊಳೆವ ಕಿರಿಚುಕ್ಕೆಗಳ ಹವಣರಿತು ಚೋದಿಸುವ
ಧೀಶಕ್ತಿ ಬೆಳಗಿಸಲಿ ಬಾಳುವೆಯು ಬೆಳಗೆ ॥

— ಅ ರಾ. ಶೆಟ್ಟಿ



ಪುಸ್ತಕ ಬೇಕಾದವರು ಕೆಳಗಿನ ವಿಳಾಸಕ್ಕೆ ಬರೆಯಿರಿ:

ಅಡಿಬಾಯಿ ರಾಮಣ್ಣ ಶೆಟ್ಟಿ,
ಧರ್ಮಸ್ಥಳ, ದ. ಕ.

# ಹೃದಯ ವೀಣೆ

## ೧. ಪ್ರಾರ್ಥನೆ

ಶ್ರೀ-ಶಾರದೆಯರೊಂದುಗೂಡಿ ನಲ್ಮೆಯಲೀ,
ಜ್ಞಾನ-ಸಂಪದಗಳನಿಶಂ ಬೆಳಗುತಿರಲೀ;
ಭಾರತಾಂಬೆಯ-ಕನ್ನಡಾಂಬೆಯರ ಸೇವೆಯಲಿ
ಸೋದರಪ್ರೇಮವನು ಸರ್ವರಲಿ ಪಸರಿಸುತ
ಬಾಳುಬೆಳಗುವ ತೆರದಿ ಹರಸು ತಾಯೀ!
ಬಾಲನನು ಪೊರೆ ಸರ್ವಶಕ್ತಿದಾಯೀ!

ಜಾತಿ, ಮತ, ಧರ್ಮ, ವಿದ್ಯಾ, ವಿಭವ ಶಕ್ತಿಗಳ
ಭೇದದಲಿ ಮಾನವತೆ ಹರಿದುಹಂಚಾಗಿರಲು
ದೇವಿ! ನಿನ್ನೆದೆಯ ಧರ್ಮಜ್ಯೋತಿಯಿಂದ,
ಕವಿದ ಕಾವಳವಳಿದು ಬೆಳಗುವುದೆ ಚಂದ;
ಪುಣ್ಯಭೂಮಿಯ ಕೀರ್ತಿಯಳಿಯದಂದದಲಿ,
ತಾಯೆ! ಪಾಲಿಸು ಸತತ ಶಾಂತಿದಾಂತಿಯಲಿ.

ಜೀವನದ ರಂಗಭೂಮಿಯೊಳೆನ್ನ ನಿಲಿಸಿರುವೆ,
ಜಗದಾದಿಶಕ್ತಿ ಮಾತೆಯೆ! ಇದೇಂ ನಗುತಿರುವೆ?
ಕರ್ತೆಯ-ಪಾತ್ರದ ಜೀವಭಾವಗಳು ನೋಟಕರ,
ನಯನಮನಕಾನಂದವೆನಿಸಿ, ಕಂಗಳು ಹರುಷ—
ಕಂಬನಿಯ ಮುತ್ತುಗಳನುಗುಳಲದೆ ಸಾರ್ಥಕವು!
ಅನಿತನುಗ್ರಹಿಸು, ಸಹೃದಯೆ, ಸದಯೆ, ಸದ್ವಿನಯೆ!

ವಿಶ್ವದೀಗುರುಕುಲದಿ ನರನು ವಟುವಾಗಿರಲು,
ಓದಿಮುಗಿಯದ ಬಾಳಹೊತ್ತಗೆಯುದಿರಲು,
ಗುರುವಾಗಿ ಜ್ಞಾನದಾನವ ನೀಡು ತಾಯಿ!
ಗುರುಪತ್ನಿಯಾಗಿ ಹಾಲನ್ನಕೊಡು ತಾಯಿ!
ಗೆಳೆಯನೊಲು ಧೈರ್ಯಸಂತೋಷಗಳ ನೀಡು,
ಒಲವು ಗೆಲವನುದಿನವು ಇರುವಂತೆ ಮಾಡು.

---

## ೨. ಕಾವ್ಯಾಂಗನೆ

೧

ಎದೆಯು ಮುದದಿ, ಹಿಗ್ಗಿಮದದಿ, ನಲಿಯಲೊಡನೆ ಬರುತಿಹೇ
ಹಿಗ್ಗುತೆದೇ, ನುಗ್ಗಿಸುಧೇ, ಕುಡಿಯುವಾಗ ಬರುತಿಹೇ
ಆಸೆಹಕ್ಕಿಯೊಡನೆ ಹಾರಿ
ಕ್ಲೇಶರೋಶದಿಂದ ಚೀರಿ
ಆಸೆಯುಳಿದು ಮರಳಿಸೇರಿ
ಒಡನೆ ಪಡೆದು ಶಾಂತಿಯು
ಮೌನವೆಂಬ, ತಿನಿಸ ತಿಂಬ, ಮನದಿ ಕಂಡೆ ಕಾಂತಿಯು.

೨

ನುಡಿಯು ಉಡೆಯು, ಹೆಣೆದಜಡೆಯು, ನೀತಿ ತಿಲಕ ಧರಿಸುತ
ಬಣ್ಣನೆಗಳ ನೇದಮುಗುಳ, ಮಾಲೆಗರಳ ಬೆರಸುತ
ಬಾಸೆತುರುಬ ಬಾಚಿ ಕಟ್ಟಿ
ಹೂವಧರಿಸಿ, ತಾಳಗುಟ್ಟಿ
ಎದೆಗೆ ರತ್ನಮಾಲೆಯೊಟ್ಟಿ
ಆತ್ಮಪದಕ ತೂಗುತ
ಕುಣಿದುತೊನೆದು ಮಣಿದುತಣಿದು ಬರುವೆ ಹಿಗ್ಗಿಬೀಗುತ.

೩

ಹರುಷಪುಳಕವೆಂಬ ಚೆಳಕ, ಮೊಗವುಸೂಸಿ ಮೂಡಿತು
ಶಾಂತಿಯಿಂದ ಚಿಗುರಿಬಂದ, ಮುಗುಳುನಗೆಯು ಕೂಡಿತು
ಝಣರವೆಂಬ ಪ್ರಾಸಗೆಜ್ಜೆ
ನಿಂತುನಿಂತು ನಡೆವ ಹೆಜ್ಜೆ
ಬೆಳಗುವಾತ್ಮ ನಿನಗೆ ಬಿಜ್ಜೆ
ನೀನೆ ದೇವರಾಣಿಯೋ?
ಹಲವುತೊಡವ ತಳೆದುಬಿಡುವ ನೀನೆ ದಿವ್ಯವಾಣಿಯೋ?

೪

ಸುಗ್ಗಿಹಸುರ, ಸೊಬಗಿನೊಸರ, ಮುಗುಳಿನೊಡನೆ ಬಿರಿಯುವೆ
ಮಧುವ ಕರೆವ, ಪಿಕದ ಸರವ, ಕೂಡಿ ಹಾಡ ಸುರಿಯುವೇ.
ತುಂಬಿಗಿಳಿಯ ಹಾಡಿನಲ್ಲಿ
ಹೊಲದ ತೆನೆಯಬೀಡಿನಲ್ಲಿ
ಶಾಂತಿಯಾಳ್ವ ನಾಡಿನಲ್ಲಿ
ನೀನು ನಾಟ್ಯವಾಡುವೇ.
ಮನದಬೆಳೆಯು, ಹೊಲಸುಕಳೆಯು, ಕಿತ್ತುಹುರುಪ ನೀಡುವೇ.

---

## ೩. ನಾನು—ನೀನು

೧

ನಾನೊಂದನೆಣಿಸಿದರೆ ನೀನೊಂದನೆಣಿಸುತಿಹೆ
ನಾನು ನೀನೇ, ನೀನು ನಾನೆಂಬುದೆಲ್ಲಿ?
ಮಾನವನ ಜೀವನದ ಗಾಢನಿದ್ರೆಯೊಳವಿತು
ಕಾಣುತಿಹುದಧಿಕ ಕನಸುಗಳ ಝಲ್ಲಿ!

೨

ವೇದಪುರಾಣಗಳ ಶಾಸ್ತ್ರಸಂದೋಹಗಳ
ಬಂಧನೆಗೆ ಸಿಲುಕದಿಹ ನಿನ್ನನಾನರಸೀ,
ವೇದಾಂತತತ್ತ್ವಗಳು ನೀತಿಧರ್ಮಂಗಳಲಿ
ಬಿಗಿವಡೆದು ಮುಂದರಿಯದಾದೆ ಶ್ರಮವಹಿಸೀ.

೩

ಜನ್ಮಸವೆದರು ತಪದಿ ದೊರಕದಿರುವಾ ನಿನ್ನ
ಹಿಡಿಕೊಳಿಗಿಡಿಜೀವ ಮಣಿಯುತಿರುವೆನ್ನ,
ನೀನು ನಾನೇ—ಎಂಬ ಹೆಮ್ಮೆಯಾಡಂಬರವು
ನನಗೇಕೆ? ನೀನು ನೀನೇ—ನಾನು ನಾನೇ!

೪

ವೇದಪೌರಾಣದಲಿ ನಿನ್ನವಾಣಿಯು ಬಿಂದು
ಸಂಪತ್ತುಸುಖಗಳಲಿ ನಿನ್ನ ಬೆಡಗು.
ಸಾಕಾರನಾಗಿರುವೆ ನೀ ನಿರಾಕಾರದಲಿ
ಲೋಕದೊಳನಂತ ವೈವಿಧ್ಯದಿಂದಾ.

---

## ೪. ಧರ್ಮ

೧

ಓ! ಧರ್ಮದೇವತೆಯೆ! ನಿಗಮದೂರನು ನಿನ್ನ-
ನೀಲೋಕಕೆಂದೆ ನಾಕದಿ ಕಳುಹಿಸಿದನಿದಕೊ!
ನಿಖಿಲ ವಿಶ್ವವೆ ನಿನ್ನ ಪಾದಕಾನತವಾಗಿ
ನಿನ್ನದ್ಭುತ ಪ್ರಭಾವಯುಶಕ್ತಿಯನೆ ನುತಿಸಿ
ನಿನಗೆ ಜೀವನದ ಸೇವೆಯ ಕಾಣಿಕೆಯನಿತ್ತು
ನಿನ್ನ ಕರುಣಾಪೂರ್ಣ ಹರಕೆಯನೆ ಬಯಸುವುದು;
ನಿರಾಕಾರನಾದ ನಿನ್ನನು ನೋಡಳೆಳಸುವುದು
ಪರಿಪರಿಯ ಭಾವದಲಿ ಬಾಗಿ ಬೇಡುವುದು.

೨

ಮೇಘಸಂಕುಲಕೆ ಸೂರ್ಯಕಿರಣಗಳು ಸೇರಿ
ಇಂದ್ರಧನುವಾಗಿ ಕಂಗೊಳಿಸುವಂತೆ, ಯುಗಯುಗದಿ,
ಕಾಲೋಚಿತದ ರೂಪದಲಿ ಮೆರೆವ ನಿನ್ನೊಡಲೊ-
ಳಿಹನು ಸರ್ವೇಶ; ನಿನಗದೆ ವಿಶ್ವಾಸವೆಂದೆನಲೆ?
ಶರಣನಾದವಗೆ ಶರಣನಾಗು ನೀನೆಲೆ ಧರ್ಮ!
ಜಗಕೆ ಜೀವಿಗೆ ಗಾಳಿ ಬೆಳಕು ಬೆಂಕಿಯು ನೀರು
ಮರ ಹಕ್ಕಿ ಮೃಗ ಕಲ್ಲು ಬುವಿ ಬಾನು ಕೆರೆ ತೊರೆಗೆ
ಉಸಿರಿನುಸಿರಾಗಿರುವೆ ಮನುಜನೆದೆಯೊಳಗಿರುವೆ.

೩

ಕಾಲದೇಶಕೆ ತಕ್ಕ ಪಾತ್ರಧಾರಕನಾಗಿ
ಕುಣಿದು ಹೋಗಲಿಕಿರುವ ಭೂರಂಗಭೂಮಿಯಿದು;
ರಾಮಕೃಷ್ಣಾವತಾರಗಳೆಲ್ಲ ನಿರಾಕಾರ-
ನೆನುವ ನಿನಗುಚಿತ ಸಾಕಾರರೂಪಗಳಲ್ಲಾ?
ನಿನ್ನ ಮಯ್ಯೆಲರ ಸೋಂಕಿಗೆ ಜೀವಜೀವಗಳ
ಕವಿದ ಕತ್ತಲೆಯುಳಿದು ಬೆಳಕು ಹೊರಹೊಮ್ಮುತಿದೆ
ವಿಶ್ವಸಂಚಾಲಕನು ಸೃಷ್ಟಿಚಕ್ರದಿ ನಿನ್ನ
ನಡುಗೀಲಿನಂತೆ ಸಂಯೋಜಿಸಿಹನಿದು ದಿಟವು.

೪

ತತ್ವವಾ ತಿರುಳಿನಲಿ ಬೊಮ್ಮನೆಂಬುವ ಬಡಗಿ
ಕೆತ್ತಿ ನಿನ್ನನು ಗೈದನೋ? ಜೀವಜೀವಗಳ
ಚಿಚ್ಛಕ್ತಿಯಿಂಚರವ ಜೋಡಿಸುತ ನಿನ್ನುವನು
ಸಪ್ತಸ್ವರಂಗಳಲಿ ಬಾರಿಸುತ ಕುಣಿಯುವನೊ
ಧರ್ಮ ಸ್ವರೂಪನೆಂದೆನುವ ವಿಭು? ನಿನ್ನಿಂದ
ನಿಖಿಲ ಭುವನಾವಳಿಯು ಕರ್ಮಚಕ್ರವು ನಿರತ
ಪಥ ಬಿಡದೆ, ಗತಿಗೆಡದೆ ನವನವೋತ್ಸಾಹದಲಿ
ಸರ್ವೇಶ್ವರಗೆ, ವಿನೋದವಿಹಾರವೆನಿಸಿದುದೆ?

## ೫. ನೀನೊಲಿಯುತ ಬಾ

೧

ಎನ್ನಯ ಜೀವನದೊರತೇ
ಎನ್ನುವ ಸತಿಸುಜನಹಿತೇ—
ಯನ್ನಾಂ ಮುತ್ತಿಡುವ ತುಟಿ,
ನಿನ್ನನು ಚುಂಬಿಸದೆ ಘಟಿ-
ಯೊಂದನು ಕಳೆಯದೆ ಹೋಯಿತೆ?
ಎಂದಾಂ ಮರುಗುವದಾಯಿತೆ?
ಇನಿಯಳ ತುಟಿಯಲಿ ನೆಲಸುತೆ
ಎನ್ನನು ಸೇರಲಿಕೆಳಸುತೆ
ಮುಗುಳುನಗೆಯಲೇ ಬೆರಸುತೆ
ನೀನೊಲಿಯುತ ಬಾಬಾ
ನೀನಲಿಯುತ ಬಾಬಾ

೨

ಸತಿಯಾ ಕೋಮಲ ದೇಹವ
ಅಪ್ಪುವ ಎನ್ನಯ ಮೋಹದ
ಕರಗಳು ನಿನ್ನಯ ತನುವನು
ಪಿಡಿದಪ್ಪುತ ಬಲು ಘನವನು
ಪಡೆಯುವೆ ಪತಿತಗಳಾದುವೆ
ಎಂಬೀ ಚಿಂತೆಯೊಳಾಳುವೆ;
ಎನ್ನನು ಬಂಧಿಪ ತರುಣಿಯು
ಎಳೆತೋಳುಗಳಲಿ ತರಣಿಯು
ತೇಜದಿ ನೇಹದಿ ಕೂಡುತ
ಎನ್ನನು ಬಿಗಿದಪ್ಪು
ಎನ್ನನು ಬಿಗಿದೊಪ್ಪು.

೩

ನಲ್ಲೆಯು ಸುಂದರ ಮೊಗದಲಿ
ಹೊರಹೊಮ್ಮುವ ನಸುನಗೆಯಲಿ
ಮುಗುಳಾಡುತ ನಿನ್ನಾನನ
ಸೂಸುವ ನಗೆಯಲಿ ಪಾವನ
ನಾಗದೆ ಹಲುಬುವ ಎನಗೆ
ಆಕೆಯು ನಗೆಯಲಿ ಲೀನತೆ
ಯಾಗುತ ಮನಸಿನ ಮಲಿನತೆ
ನೀಗುತ ವಿಧವಿಧ ಸಂತಸ
ದಾಗರವೀ ಮಧು ಮಾನಸ
ವೆನ್ನಲು ಮುದಸುರಿಸು
ಸೊಬಗಿನ ಸೊದೆವೆರಸು.

---

## ೬. ಸುರಚಾಪ

೧

ನೀರದ ನಿಕರಾಚ್ಛಾದಿತ ಗಗನವು
ಧಾರಿಣಿಯನೆ ಚೆಕ್ಕಸಗೊಳಿಸೇ,
ಭೋರೆನುತಲಿ ಸುರಿವಾ ಮಳೆಗಾಳಿಯು
ಕಾರ ಸೊಬಗನಿಮ್ಮಡಿಗೊಳಿಸೇ,
ಬಿಳಿಮುಗಿಲಾಗಸವನು ಕವಿಯೇ
ಹಲವು ತೆರದ ಬಣ್ಣವ ಸವಿಯೇ
ಚಾಪವಿದು । ಸುರ—
ಚಾಪವಿದು.

## ೮. ಕಾಲ

ಹುಟ್ಟುಸಾವುಗಳೊಡನೆ ಹುಟ್ಟಿಬಂದವ ನೀನು
ರವಿಶಶಿಗಳೊಡಗೂಡಿ ನಲಿಯುವವನು ॥
ನಿನ್ನಿರವ ನಿನ್ನರವನೆಂತೆಂಬೆನೆಲೆ ದೇವ!
ಚಿನ್ನಾಟವಾಡುತಲೆ ಬೆಳೆಯುವವನು ॥ ೧ ॥

ಋತುಭೇದದುಡೆಗಳನು ಉಡಿಸಿ ಕುಣಿಸುವುದೇನು?
ಈ ಸೃಷ್ಟಿ? ಆ ಬಲ್ಮೆ ಅದಕಿಪ್ಪುದೇ? ॥
ಸೃಷ್ಟಿ ಭೂಷಣತೊಟ್ಟು ನೀನೆ ಮೆರೆವುದೋ? ನಿನಗೆ—
ಸೋತು ಸೃಷ್ಟಿಯೆ ತೊಡಿಸುವುದೊ ತಪ್ಪದೇ? ॥ ೨ ॥

ಧರ್ಮನೀತಿಗಳೆಲ್ಲ ನಿನ್ನರೂಪವ ಹಲವು
ತರವಾಗಿ ನಟನಂತೆ ಮೆರೆಸಬಹುದು ॥
ಹಲವು ಮಣಿಗಳ ಕೋದ ಒಂದೆ ಹಾರದ ತೆರದ
ನಿರ್ಬಂಧ ನಿರ್ಲಿಪ್ತ ನೀನೆ ಅಹುದು ॥ ೩ ॥

ಸಾವುಸಂಕಟ ಹಿಂದೆ, ಸರಸ-ಸಂತಸ ಮುಂದೆ
ಹಿಂದುಮುಂದುಗಳೆಲ್ಲ ನಿನಗೆ ಒಂದೇ ॥
ನಲವೇರಿ ನರ್ತಿಸುವ ಅಳಲಿನಲಿ ದುಃಖಿಸುವ
ನೀನೆ ಸಕಲಾತ್ಮಕನು ಜಗದ ತಂದೆ ॥ ೪ ॥

ಜಗದ ಸವಿಸೊಗಸುಗಳು ನಿನ್ನೆದೆಯ ಕುಸುಮದೊಳು
ಜಿನುಗುತಿದೆ, ಕಾಣಲಿಲ್ಲಾವತುಂಬಿ? ॥
ಕಂಡ ಮರಿದುಂಬಿಯುದ ಚುಂಬಿಸದೆ ಬಿಡಲಿಲ್ಲ
ಬಂದಷ್ಟು ಹೀರಿ ತನ್ನೆದೆಯತುಂಬಿ. ॥ ೫ ॥

ಪೌರುಷದ ಪರಶುವನು ನರನು ಹಿಡಿಯಲುಬೇಕು
ಆತಂಕದಾತರುವ ಮುರಿಯಬೇಕು ॥
ಸಾಮರ್ಥ್ಯಕುಂದಿದರು ಆಸೆ ಕೆಡದಿರಬೇಕು
ನಿನ್ನೊಲುಮೆಯಲಿ ದಡಸೇರಬೇಕು ॥ ೬ ॥

# ೯. ಪ್ರಶ್ನೋತ್ತರ

೧

ಚಿತ್ತವೆಲ್ಲ ಕತ್ತಲಾಗಿ
ಅಳಲವಿಷವನುಂಡು ತೇಗಿ
ಬಳಲುವಾಗ ಚಂದ್ರನಂತೆ
ಬೆಳಗಿಬರುವನಾರವಂ?

೨

ಮುಗಿಲಹನಿಗೆ ಬಾಯಿತೆರೆದು
ಚಾದಗೆಗಳು ಬಹಳಕಾದು
ಮರುಗುವಾಗ ಮಳೆಯಸುರಿಸಿ
ಪೊರೆವ ಕರುಣಿಯಾರವಂ?

೩

ಸುತ್ತುಮುತ್ತು ಬಾಣಬಂದು
ತಾಗಿ, ಹುಲ್ಲೆಮರಿಯು ನೊಂದು
ದಿಕ್ಕುಕಾಣದಿರುವ ವೇಳೆ
ದಾರಿತೋರ್ಪನಾರವಂ?

೪

ತುಂಬಿ ಹಾಡಕೇಳಿದೊಡನೆ
ಎಸಳುಬಿಚ್ಚಿ, ಅರಳುತೊಡನೆ
ನಿಲ್ಲುವಂತೆ ಕಮಲದಳಕೆ
ಕಿವಿಯನಿತ್ತನಾವನು?

೫

ಚಳಿಯು ಮಾಗಿಯೊಡಲ ಸೀಳಿ
ನಲಿವ ಸುಗ್ಗಿ ಸೆಕೆಯತಾಳಿ
ಬೆಳೆಯುವಂತೆ ಮೊಳೆಯನಿತ್ತ
ಮಾಟಗಾರನಾವನು?

೬

ಎದೆಯಮನೆಯ ಮೂಲೆಯಲ್ಲಿ
ಇಟ್ಟ ಕಿರಿಯ ವೀಣೆಯಲ್ಲಿ
ಆತ್ಮವಾಣಿಯನ್ನು ನುಡಿಸಿ
ಒಲಿಸುವವನದಾವನು?

೭

ಬುವಿಯ ಗುಪ್ತ ವೀಣೆದನಿಗೆ
ನನ್ನ ಕಿವಿಯು ಮಾಸಲಾಗೆ
ಮಡಗುತದದು ಕೇಳುವಂತೆ
ಎಸಗುವವನದಾವನು?

೮

ನಿರ್ಮಲಾಂತಃಕರಣದಲ್ಲಿ
ಮನವನೊಲಿಸಿ ನಲಿಸಲಲ್ಲಿ
ಹೊಸತುಹೊಸತು ಚಿತ್ರಬರೆವ
ಚಿತ್ರಗಾರನಾವನು?

೯

"ಮನದಮೊನೆಯ ಮನೆಯಮೇಲೆ
ತೊನೆದು, ನಲ್ಮೆಯಿಂದ ಲೀಲೆ
ತೋರಿನಗೆಯ, ಬೀರಿಬಗೆಯ
ಬೆಳಗಿಸುವ ಪ್ರಭಾಕರ!"

೧೦

"ಅನಸೆ ಎಲ್ಲ ರೂಪವಾಂತು
ಮಾಂಸಪರದೆಯೊಳಗೆ ನಿಂತು
ಜೀವಿಗಳನು ಚೋದಿಸುತಿಹ
ಬಲ್ಲಿದ ಸುಗುಣಾಕರ."

# ೧೦. ಮನದನ್ನ

೧

ತನುವಿನ ಸುಂದರ ಕೋಣೆಯೊ
ಳಿರುವಳು ಬಯಕೆಯ ರಾಣಿಯು
ಮುಂದಿನ ಕದಗಳನೈದನು
ತೆರೆಯುತ ವಿಷಯಗಳೈದನು
ತರತರದಲಿ ಕಂಡೊಲಿವಳು
ಬೆರಳಲಿ ನೆಲವನು ಕೊರೆವಳು
ಮುಗುಳು ನಗೆಯಲೇ ಕರೆವಳು
ಮುಂಗುರುಳನೆ ತಿದ್ದುವಳು
ಪಡೆಯುವ ಮನದಿಂದ
ಒಡನಾಟದ ಬಂಧ.

೨

ಶಬ್ದವತಿಯು, ಸ್ಪರ್ಶವತಿಯು,
ರೂಪವತಿಯು, ರಸವತಿಯು,
ಗಂಧವತಿಯು ಇವರೈವರು
ನಲಿನಲಿಯುತ ಬರುತಿರುವರು
ರಾಣಿಯ ಮನವನು ಮೋಹಿಸಿ
ತಮ್ಮೊಡನಾಟಕೆ ಸೇರಿಸಿ
ಮನದನ್ನನ ಧಿಕ್ಕರಿಸಿ
ಮೋಹದ ಬಲೆಯನು ಬೀಸಿ
ಸನಿಹಕೆ ಬರುತಿಹರು
ಮನವನೆ ಸೆಳೆದಿಹರು.

೩

ಎಲೆ! ಬಾಲಕಿಯರೆ ನಿಮ್ಮಯ
ಚೆಲುವಿನ ದೇಹದೊಳೆಮ್ಮಯ
ಮನವನು ಸೆರೆಪಿಡಿದೆಳೆವಿರಿ;
ಬರದಿರೆ ನೀವೇಂಗೈವಿರಿ?
ನಿಮ್ಮೊಡತಿಯ ಕೈಸನ್ನೆಗೆ
ನಮ್ಮನುಕಾಡುವುದೇ ಬಗೆ?
ಎನ್ನೊಡೆಯನ ಆಸ್ಥಾನಕೆ
ಕರೆದೊಯ್ಯುವೆ ತಡವೇತಕೆ!
ನಡೆಯಿರಿ ಬಾಲೆಯರೆ!
ಸುಮತಿ ವಿಶಾಲೆಯರೆ!

೪

ಮನದನ್ನನ ಸನ್ನಿಧಿಯಲಿ
ನಿಮ್ಮನು ಕರೆದೊಯ್ಯುತಲಿ
ನಿಲಿಸುವೆ ರಾಣಿಯ ಸಹಿತಲಿ
ಜೀವನ ಸಾಮ್ರಾಜ್ಯದ ಹೊಣೆ
ಹೊತ್ತಿಹ ಮನದನ್ನನಿಗೆಣೆ-
ಗಾಣೆನು, ನೀವೆಲ್ಲರೂ
ಆತನ ಸೇವೆಯ ಜನರೂ
ಸುಲಿಗೆಯೆಜೀವನ? ಎಲ್ಲರು
ಪ್ರೇಮದೊಳಿರೆ, ಮನದನ್ನ
ದೊರೆವೆನು, ಬಿಡುಬನ್ನ.

# ೧೧. ನನ್ನವಳು—ನನ್ನಾಕೆ

೧

ಹಗಲಿರುಳು ಎನ್ನನನುಸರಿಸಿ ನಡೆವವಳಾರೊ?
ಎನಗಾಗಿ ಊಟನಿದ್ರೆಯನು ತೊರೆವವಳಾರೊ
ಕನಸುಮನಸುಗಳಲ್ಲಿ ಎನ್ನನೆನೆವವಳಾರೊ
ಚಿಂತೆಯೆಂಬುವ ಕೊಳೆಯ ತೊಳೆದುಬಿಡುವವಳಾರೊ
ಅವಳೆ ನನ್ನವಳು—ನನ್ನಾಕೆ.

೨

ಸುತ್ತುಮುತ್ತಲು ಕೂಡಿ ಶತ್ರುಜನವೈತರಲು
ವೀರರುಡಿಗೆಯನುಡಿಸಿ ಕೂರಸಿಯ ಕೈಗಿತ್ತು
ಕೀರ್ತ್ಯಂಗನೆಯ ವರಿಸಿ ಬಾರೆಂದು ಕಳುಹುವಳು
ಪ್ರಣಯ ಲೀಲೆಯ ಮನ್ಮಥನೆಂದು ಗಳಹುವಳು
ತಾನೆ ರತಿಯಾಗಿ—ನನ್ನಾಕೆ.

೩

ಎನ್ನ **ಹೃದಯೇಶ್ವರನ** ಪೂಜಿಸುವ ಕಾಲದಲಿ
ಪತ್ರಪುಷ್ಪವ ಧೂಪದೀಪಾರತಿಯ ತಂದು
ಅನುಸರಿಸಿ 'ಪತಿದೇವ'ನೆಂದೆನ್ನ ಪೂಜಿಸುತ
ಜೀವನದ ನಾಟಕವ ಕಣ್ಮನಾನಂದಕರ-
ವೆನಿಸಿ ತೋರುವಳು—ನನ್ನಾಕೆ

೪

ಜೀವನದ ಬಿಸಿಲುರಿಯ ತಣಿಪ ಚಾಮರದಂತೆ
ಮೋಹ, ಮಾಯೆಯ ಹಸಿವುತೃಷೆಗಳಿಗೆ ಸುಧೆಯಂತೆ
ಅಜ್ಞಾನಕತ್ತಲಿನ ಪಥಕೆ ಕಕ್ಕಡದಂತೆ
ಬಯಕೆಗಳನೊಲಿದೀವ ಸುರಸುರಭಿಯಂದದಲಿ
ವರವನೋರಮೆಯೆ—ನನ್ನವಳು.

೫

ತನ್ನಾತ್ಮದುನ್ನತಿಯ ಪಥದಿ ನಡೆಯುವ ಸಮಯ
ಎನ್ನ ಹಿಂದೆಯೆ ಬಂದು ಪ್ರೇರೇಪಿಸುವಳಾರೊ
ತಿರೆಯ ಕವಡಿನ ಮುಸುಕಿನೊಳಗಿನಾಟಪನಾಡಿ
ಅದನುಳಿದು ಜತೆಯಿಂದ ಮೇಲೇರುವವಳಾರೊ
ಆಶಕ್ತಿರೂಪೆ—ನನ್ನವಳು.

೬

ಎನ್ನೆದೆಯ ಉದ್ಯಾನವನದ ಕೊಳೆಕೊರತೆಗಳ
ತನ್ನಕೈಯುಲೆ ಕಿತ್ತು, ನಳನಳಿಪ ಎಳೆಸಸಿಯ
ಅಲ್ಲಲ್ಲಿ ನೆಟ್ಟು ನೀರೆರೆದು ಬೆಳೆಬೆಳೆಸುವಳಾರೊ
ಕೆಡದಂತೆ ಜಾಗ್ರತೆಯೊಳದನೆ ಪಾಲಿಪಳಾರೊ
ಸಾನಂದಪ್ರೀತೆ—ನನ್ನವಳು.

---

## ೧೨. ಅರಿಕೆ

೧

ಅಜ್ಞಾನಕತ್ತಲಲಿ ಸುರಿದ ವಿಷಯದ ಮಂಜು
ಎನ್ನೆದೆಯ ಹುಲ್ಲೆಸಳ ಸಿಂಗರಿಸಲು
ಮನದಾಳದಾಗಸದಿ ನೀನುದಯವಾಗದಿರೆ
ಹನಿಯುಳಿದು ಬೆಳಗಲಪ್ಪೆನೆ ಸರ್ವಥಾ.

೨

ಎದೆಯ ಹಣ್ಣನು ಕುಕ್ಕಿ ನಿನ್ನ ಬಾನದಹಕ್ಕಿ
ಪ್ರೇಮರಸದಲಿ ತುಂಬಿ ಸರಸುರಿಯಲೂ.
ಸುರಿದ ಹಕ್ಕಿಯ ಹಾಡು ವನದ ಬಾಲಕನೆಡೆಗೆ
ವೀಣೆಯಾ ಮೆಲ್ದನಿಯ ಮುದವೀಯಲೀ.

೩

ಬಿದ್ದು ಮಡಿಯುವೆನೆಂದು ಉರಿಯುವ ದೀಪದ ಬಳಿಗೆ
ಎದ್ದೋಡುವುದು ಎನ್ನ ಬಯಕೆ ಹುಳವು
ನಡುದಾರಿಯೊಳೆ ನೀನು ಶಾಂತಿಸೊಡರನ್ನಿತ್ತು
ಕಾಂತಿಯುಣ್ಣಿಸಿ ಉಳಿಸಿ ಹಿಂದೆ ಕಳುಹು.

೪

ಕಾರಿರುಳದಾರಿಯಲಿ ನಡೆವ ಪಥಿಕನು ನಾನು
ಶಶಿಯು ನಗೆವೆಳಕಿಲ್ಲಿ ಮುಚ್ಚಿ
ಕಾಣದೆ ಸವಿಾರನೊಲು ಮೇಘಗಳ ಬದಿಗೊತ್ತಿ
ಬೆಳದಿಂಗಳನ್ನಿತ್ತು ಪಯಣಮುಗಿಸು.

---

## ೧೩. ಶ್ರೀ ಗೋಮಟೇಶ

೧

ಪರ್ವತಾಗ್ರದಿ ನಿಂತ ನಗ್ನಸನ್ಯಾಸಿಯೇ!
ಭವದಮೋಹದ ಮೋಡದಿಂದ ಸರಿದು
ಪರಮಪದವನು ಪಡೆವ ಧ್ಯಾನಯೋಗವೆ ಭೋಗ,
ಅದಕಾಗಿ ಪಾರ್ಥಿವದ ಸರ್ವಸುಖತ್ಯಾಗ.
ಎಂದೆಂಬ ಸದುಪದೇಶವು ಚಿರಂತನವಿರಲು
ಕಲ್ಲಿನಲಿ ಕೊರೆದಿಲ್ಲಿ ನಿಲ್ಲಿಸಿದರೇ?
ಹಲವು ಜನ್ಮಾಂತರದ ಸುಕೃತಫಲವೊಂದಾಗಿ
ಬಲ್ಲಿದ ಕಲಾವಿದನ ಕಯ್ಯೊಳುದಿಸಿದುದೇ?

೨

ಸತ್ಸಂಗ, ಸತ್ಕರ್ಮ, ಸದ್ವಿಷಯದನುರಕ್ತಿ,
ಸದ್ಭಕ್ತಿ, ಸಕಲವೂ 'ಸತ್' ಆಗಲು
ಜನನ, ಮರಣದ ರೋಗರುಜೆಗಳನು ಮೀರಿರುವ
ಚಿರಚಿರಂತನವಾದ ಪ್ರಭೆ ಬೆಳಗಲು
ಭೋಗಭೂಮಿಯ ವಿವಿಧ ಭೋಗಸುಖಗಳನರಿತು
ತ್ಯಾಗವೇ ಪರಮಚಿರಸುಖವೆಂಬುದ
ಧರಣಿಗತ್ಯಾದರ್ಶವಾದ ಸಂದೇಶಗಳ
ನೊರೆವ ನೀನೇ ಧನ್ಯನಲ್ತೆ ಋಷಿಯೇ

೩

ಮನುಜತನ-ಪಶುತನಗಳೊಳಗೆ ನಿತ್ಯ,
ಎಡೆಬಿಡದೆ ನಡೆಯುತಿಹ ಸಮರದಲ್ಲಿ,
ಸಾಮ್ರಾಜ್ಯ, ಸೈನ್ಯ, ಸಂಪದ, ಬೆಳ್ಗೊಡೆಗಳನ್ನು
ಪಾಶವಿಕಶಕ್ತಿಯಲಿ ಪಡೆದುಮೆರೆಯಲು ಬಹುದು,
ಚಿತ್ತವೃತ್ತಿ ನಿರೋಧದಿಂದ ಪರಮಾತ್ಮನನು
ಕಂಡು ಪರಮಾನಂದ ಸವಿಯುಲಸದಳವೆನಲು
ವೀರಯೋಗಿಯೆ! ಭೋಗಭಾಗ್ಯಗಳ ನೀಗಿ
ಸೇರಿಪಡೆದಿಹೆಯಮರಪದವ ಸ್ಥಿರವಾಗಿ

೪

ಮೌನಮುದ್ರೆಯನಾಂತ ದಿವ್ಯತೇಜಪ್ರಶಾಂತ
ಮೂರ್ತಿ, ನಿನ್ನವಿರಕ್ತ ನಿರ್ಮಲಾಕಾಶದಲಿ
ಹೊಳೆವ ತಾರಾಗಣದ, ಪೂರ್ಣಚಂದ್ರನ ಬೆಳಕು
ಇಳೆಯ ಜೀವಾವಳಿಯ ಹೃದಯತಲವನು ತೋರ
ಲದಕೆ ಮೌನವನಾಂತಿಹೆಯ? ಮಾನವನು ತನ್ನ
ಬಂಧುಬಾಂಧವ ಮಿತ್ರರೆಲ್ಲರನು ವಿಧವಿಧದಿ
ಸುಲಿದು ಬಾಳುವುದೆ ಹಿರಿತನದ ಕುರುಹಾಗಿಹುದೆ?
ಸಂಸಾರ ಜೀವನಕೆ ಧಿಕ್ಕಾರವೆನುತಿಹೆಯ?

೫

ಭಾರತದ ಸಂಸ್ಕೃತಿಯು ಪೂರ್ವಾಪರವನರಿತು
ಶಾಂತನಾದೆಯ! ದಿವ್ಯಭವ್ಯ ಶಾಂತಾಕಾರ!
ಸಾಗರದ ತೀರದಲಿ, ಕೈಬೆರಳಿನಲಿ ವಿವಿಧ
ಚಿತ್ರಗಳ ನಗುನಗುತ ಬರೆವ ಹಸುಳೆಯು ಓಡಿ—
ಆಡುತಿರೆ, ತೆರೆಯೊಂದು ಬಡಿದಪ್ಪಳಿಸಿದೊಡನೆ
ಅಳಿವಂತೆ, ಧರ್ಮ–ರತ್ನಾಸನಗಳುರುಳಿದರು
ಜೀವದಯೆ ಬಾಹ್ಯಾಂತರಂಗದಲಿ ಪ್ರವಹಿಸುವ
ರಾಜ–ಧರ್ಮಗಳೆ **ಚಿರವೆಂದು** ನಸುನಗುತಿಹೆಯ?

---

## ೧೪. ಏತಕೆ?

೧

ಸ್ಥಿರತೆಯುಲಿ ತಪಗೈವ ಸಂಕಲ್ಪ ಬೀಜವದು
ಮನದ ಹೊಲದಲಿ ಬೀಳೆ, ಅದನು ಕಾಪಾಡದಿಹ-
ಚಾಂಚಲ್ಯಚಿತ್ತ ನೆಲೆಯಾಗಿ ನಿಲ್ಲುವತನಕ ತಪದ ಗೊಂದಲವೇತಕೆ?
ತನ್ನ ದುಷ್ಕೃತಗಳನು ಸರಿಯಾಗಿ ಕಣ್ಣೆದಿರು
ತರಲಾರದಿರುವಾ ವಿಚಾರವಿದ್ದೇನು ಫಲ?
ನ್ಯಾಯ ಅನ್ಯಾಯಗಳ ವಿಂಗಡಿಸಿ ತಿಳಿಯದ ವಿವೇಕವಿದ್ದರದೇತಕೆ?

೨

ಧರ್ಮಸಂಕಟಕಾಲದಲಿ ಸಂಶಯದಿ ಬೀಳೆ
ಒಳಗೊಳಗೆ ಹೊಲಬರಿಯದಳಲುತಲೆ ಮನವಿರಲು
ತನ್ನೆದೆಯ ದಿವ್ಯನುಡಿಯಿಂತೆಂದು ಪೇಳದಿರಲಾವ ನಿಷ್ಠೆಗಳೇತಕೆ?
ಮಾಯೆಯಾ ಬರಸಿಡಿಲು ಮಾಗುತಿಹ ಮನಕೆರಗೆ
ಆತ್ಮ ಚೈತನ್ಯವನ್ನುಳಿಸಿಕೊಳ್ಳುವ ಧೈರ್ಯ
ಪಾಪಭೀತಿಯ ಹೃದಯದಿಂದುದಿಸಿ ಬಾರದಿರಲಾವ ಗುಣವೇತಕೆ?

೩

ಪರರತುಲ ಸಂಕಷ್ಟಕಾಲದಲಿ ಮನಕರಗಿ
ಅವರ ಶೋಕಕೆ ಭಾಗಿಯಾಗುವಂದದ ದಯವು
ಅನ್ಯೋನ್ಯಭಾವದಿಂದೊಡೆದು ಮೂಡದೆಯಿರಲು ಆವ ಒಲ್ಮೆಗಳೇತಕೆ?
ತಾನಾಗಿ ಯೆದೆಯಲರು ಸೌಸವವ ಸೂಸುತಿರೆ
ಆಘ್ರಾಣಿಸುತ ಮೋದಗೊಂಡು ನಲಿದಾಡದಿರೆ
ಅದಕಾಗಿ ಹಂಬಲಿಸಿ ಅದನುಂಡು ತೇಗದಿರಲಾವ ನಲ್ಮೆಗಳೇತಕೆ?

೪

ತನ್ನ ಗುರಿ, ತನ್ನ ಪಥ, ತನ್ನ ಪಯಣವನರಿತು
ಮುಂದರಿಯಲಡಿಯಿಡಲು ಶಂಕೆಗಳ ಕಿತ್ತೊಗೆವ
ಆತ್ಮವಿಶ್ವಾಸವದು ತುಂಬಿತುಳುಕದೆಯಿರಲು ಆವ ಸಾಧನವೇತಕೆ?
ತನ್ನಾತ್ಮ ತನ್ನೊಡೆಯನನು ಧ್ಯಾನಿಸುವ ಕಾಲ
ತನ್ನ ಹೃದಯವೆ ಕರಗಿ ಹೊನಲಾಗಿ ಹರಿಯದಿರೆ
ಕರಣೇಂದ್ರಿಯಗಳ ವ್ಯವಹಾರವಳಿಯದೆಯಿರಲು ಭಕ್ತಿಭಜನೆಗಳೇತಕೆ?

---

## ೧೫. ಮುದ್ದು ಕವಿ ಮುದ್ದಣಗೆ

೧

ತೆಂಕಗನ್ನಡನಾಡು, ಶ್ರೀಕೃಷ್ಣನಿಗೆ ಬೀಡು
ಹುಟ್ಟಿ ಬೆಳೆದೂರುಗಳ ಬಿಟ್ಟು ಬಂದಿಹನು
ವೃಂದಾವನವನಗಲಿ, ಅದರ ಸೊಬಗನು ತೆಗಳಿ
ಕನ್ನಡದ ನಂದನಕೆ ಸೊಗವ ತಂದಿಹನು.

೨

ಕನ್ನಡದ ನಂದನದೊಳೊಂದು ಕೋಗಿಲೆಯಿತ್ತು
ಅದನು ಕಂಡವರಿಲ್ಲ, ನುಡಿಸಿದವರಿಲ್ಲ.
ಅಜ್ಞಾತಕೋಗಿಲೆಯು ಕರೆದು ನುಡಿಸಿದನೀತ
ಮೌನಭಾವದೊಳಿತ್ತು; ಮರುನುಡಿಯಲಿಲ್ಲ.

೩

“ಬಗ್ಗಿಸೆಲೆ! ಕೋಗಿಲೆಯೆ ಮೌನವಟ್ಟಿರ್ಪುದೇಂ?
ಮಾಮರನ ಸೆಳೆಗೊಂಬಿನಲ್ಲಿ ಕುಳಿತು?”
ಎಂದಡಾಗಲೆ ಪಿಕದ ಕೂಜನವು ಕೇಳಿಸಿತು.
ರಸಿಕ ಪ್ರಪಂಚವನು ಬೇಗನೆಬ್ಬಿಸಿತು.

೪

ಮುದ್ದಣ-ಮನೋರಮೆಯರಧಿಕ ಸಲ್ಲಾಪದಲಿ
ಪ್ರಣಯಶಕ್ತಿಗಳ ಸಾಯುಜ್ಯ ಧರ್ಮದಲಿ
ಶಿರೆಗೆ ಪೂರ್ಣ ಪ್ರೇಮ ಧರ್ಮವನೆ ಹರಡಿತ್ತು
“ರಾಮಾಶ್ವಮೇಧ”ವೆಂದದಕೆ ಹೆಸರಾಯ್ತು.

೫

“ಶ್ರೀರಾಮ ಪಟ್ಟಾಭಿಷೇಕ”ವೆಂಬುವ ಕಾವ್ಯ
ರಾಮಾಯಣದೊ“ಳದ್ಭುತಕೃತಿ”ಯು ಸೇವ್ಯ.
ಲಂಕೆಯಲಿ ತಲೆಯೆತ್ತಿ ನಿಂತ ತ್ರಿಕುಟಾಚಲವೊ
ರಸಿಕಕಡಲಲಿ ದೊರೆತ ರತ್ನತ್ರಯವೋ?

೬

“ಪದ್ಯಪದ್ಯಂ-ಗದ್ಯಹೃದ್ಯ”ವೆಂಬುದ ನುಡಿದೆ
ನುಡಿದಂತೆ ತೋರಿಸಿದೆ ಕೃತಿಯೊಳೆಡೆಗೆಡದೆ
ಕರ್ಮಣಿಯ ಸರದಲ್ಲಿ ಚೆಂಬವಳವನು ಕೋದು
ಕಾವ್ಯಕಾಮಿನಿಗೆ ತೊಡಿಸಿರುವೆ ನಲವಿಂದೆ

೭

“ನಿಂದಿಸುವ ಜನರ ದುರ್ವಾಕ್ಯಮಂ ಕೇಳ್ದು ಕವಿ-
ಕುಂದನೆ”ಂಬುದ ಕಾವ್ಯದಲ್ಲಿ ತೋರಿಸಿದೇ.
“ಕನ್ನಡಿಗರಿಗೆ ಮನೆಯ ಊಳಿಗದ ಕನ್ನಡಿಗ-
ನೆ”ಂದು ಸವಿನಯವನ್ನು ಮತ್ತೊಮ್ಮೆ ನುಡಿದೇ.

೮

ಮಧುಸವಿಯುಸಾರಡಿಯು ತಿಳಿದಾಗಲೇ, ವಸುಂ-
ಧರೆಯು ಚೇತನ ಸವಿಯನರಿತಾಗಲೇ,
ಕವಿದು ನಿನ್ನುವನೊಯ್ದು ನಿಷ್ಕರುಣಿ ಮೃತ್ಯುವಂ
ಧಿಕ್ಕರಿಸಿ, ಕಣ್ಣೀರ ಕಾಣಿಕೆಯನಿದೊ ಕೊಡುವೆ.

---

## ೧೬. ಹಿಗ್ಗದಿರು

೧

ಸುರಚಾಪವಂತೆ, ಹೊಳೆದಳಿವ ಮಿಂಚಹುದಂತೆ,
ನೀರಬೊಬ್ಬುಳಿಯಂತೆ, ಕ್ಷಣಿಕವಂತೆ;
ಕವಿಗಳೀತೆರದಿಂದ ಮಾನವನ ಜೀವನವ
ಉಪಮೆಯಲಿ ಬರೆಯುವರು ಬಣ್ಣಿಸುತ್ತೆ.

೨

ಜೀವನದ ಸಂಗ್ರಹದ ವಿವಿಧ ರಸಗಳ ತುಂಬಿ
ಗೈವ ಪಾಕಕೆ ಮಿಗಿಲು, ಕಾರಬಿಸಿಲು
ಸದ್ಧರ್ಮವನು ನೀತಿಘೃತದಿ ಬೇಯಿಸಿಕೊಂಡು
ಪುಣ್ಯ, ಋತ, ಭೂತದಯೆ, ನಿರ್ವಂಚನೆ,

೩

ಅನಸೂಯೆ, ಸಹನೆಗಳ ತಿಕ್ಕಿದ ಮಸಾಲೆಯನು
ಚೆಂದ ಸದ್ಧರ್ಮದಲಿ ಬೆರಸಿಕೊಳುತ.
ಸುವಿಚಾರದುಪ್ಪಸಿಡು-ಭಕ್ತಿಯಲಿ ಒಗ್ಗರಿಸು
ಸುಜನತೆಯ ತಿರುಕರಿಗೆ ಉಣ್ಣಬಡಿಸು.

೪

ಮರೆಮೋಸ, ಕಪಟಗಳ ಒಗರುಚೊಗರನು ಮಾತ್ರ
ನೀನಿದಕೆ ಬೆರಸದಿರು ಎಡವಿತಡವಿ;
ಅಕಳಂಕತೆಯ ಅಶನದೊಡನೆ ಸೇರಿಸಿ ಉಣ್ಣು;
ನಿರ್ಮೋಹ ಪಾನವನು ಕುಡಿದು ತೇಗು.

೫

ಸತ್ಕರ್ಮಗಳಗೈದು ಸತ್ಸಂಗದಲೆ ನಡೆದು
ಸದ್ವರ್ತನೆಯ ಪಥದಿ ದುಡಿದು ಮಡಿದು.
ಸಕಲ ಸೋದರರ ಸೇವೆಯುಗೈದು ಶಾಂತಿಯಲಿ
ಬಾಳಸಾರ್ಥಕಗೊಳಿಸು ಕೀರ್ತಿ ನಿಲಿಸು.

೬

ನುಡಿವರಿದು ಸುಲಭ, ನಡೆವಲ್ಲಿ ಬಲು ಕಠಿಣವೆನೆ
ನುಡಿದಂತೆ ನಡೆದು ಸರಳತೆಯ ಬಿತ್ತರಿಸು;
ದುಡುಕಿನಲಿ ತಲೆಯೆತ್ತಿ ಕಡುಮುಳಿದ ಸರ್ಪನೊಲು
ಕಡಿಯದಿರು ಕೆಡಿಸದಿರು ಜೀವನಾಮೃತವ.

೭

ಜೀವನದ ಪಯಣದಲಿ ವಿವಿಧ ವಿಭವಗಳಲ್ಲಿ
ನಾನೆ ಬಲ್ಲಿದನೆನಗೆ ಸರಿಯಿಲ್ಲವೆಂಬ
ಹಾನಿಕರವಾದ ಗರ್ವಾದ್ರಿ ಬೆಳೆಯದೆ ಇರಲಿ
ಜೀವನವು ಉದ್ಯಾನವನವೆಂಬುದಿರಲಿ.

೮

ಬರಿದಾದ ಎದೆಯು ಬಿಂದಿಗೆ ದಿನದ ದುಡಿತದಲಿ
ತುಂಬಿತುಳುಕುತಲಿ, ತುಳುಕುವನಿತು ಕಾಲ
ಜೀವಕೋಟಿಗಳಲ್ಲಿ ಸೋದರ ಪ್ರೇಮದಲಿ
ಮುಡಿನದೆಯನಿಡಲದುವೆ ಶ್ರೇಯ ಬೇರಿಲ್ಲ.

## ೧೭. ಚಿಂತೆ

೧

ಬಿರುಬಿಸಿಲ ಎಳೆವಳ್ಳಿ, ಸುರಿಮಳೆಯು ಕಿರುಬಾಲ;
ನಡುವಿರುಳ ಪಂಕೇಜದಂತೆ;
ಸುಡುತಲಿದೆ ತೋಡುತಿದೆ ಮುಸುಕಿ ಮುಚ್ಚುತ್ತಲಿದೆ
ಜಗದ ಜೀವಿಗಳಿಗಿಹ ಚಿಂತೆ.

೨

ಜಗದ ಜೀವಿಗಳೆದೆಯ ಮನೆಯೊಳವಿತಿಹ ವನಿತೆ,
ಮೃತ್ಯುವನು ಜೈಸಿರುವ ಅಮರ ಕನ್ನೆ
ಕಳೆದ ಹರುಷದ ಬೆಲೆಯನೊರೆದೊರೆದು ತೋರಿಸುತ
ನೆನಹಿನೆದುರಿಗೆ ತರುವ ನೀನೆ ಧನ್ಯೆ.

೩

ನಿನಗೆ ಸಾವಿರ ವೇಷ, ಒಲಿಸಿ ನಲಿಯುವ ಹಾಸ
ರೋಮರೋಮಗಳಲ್ಲಿ ಜಿನುಗುತಿರುವೆ;
ಸುರಪನಾನಂದದಲಿ, ಧನದನೈಶ್ವರ್ಯದಲಿ,
ಕಾಲೋಚಿತದೆ ಬಂದು ಇಣುಕುತಿರುವೆ.

೪

ಜೀವನದ ಚಿಲುಮೆಯಲಿ ತಳವಿಡಿದ ಕೊಳೆಕಸವ
ಎತ್ತಿಮೇಲಕೆ ತಂದು ಬಿಸುಡುವವಳೇ?
ಒಮ್ಮೆ ಕಲಕಿದರೇನು ಬಳಿಕ ತಿಳಿಯಲಪ್ಪುದೆನೆ
ನಿನ್ನ ಗುಣವನ್ನಾರು ತಿಳಿಯರಲ್ಲೇ?

೫

ವ್ಯಕ್ತವನ್ನಳೆವನಿತು ದಿನ ನಿನ್ನ ಜತೆಯಿರಲಿ,
ಕಟ್ಟುನಿಟ್ಟಿನ ಜಂಜಡವನೆಸೆಯಲು;
ಅಲ್ಲಿ ನಿನ್ನ ಸಮಾಧಿ, ನಿನ್ನ ಪರಮಾವಧಿಯು
ಒಂದಡಿಯು ಮುಂದಿಡದೆ ಹಿಂದೆ ತೆರಳು.

೬

ಅವ್ಯಕ್ತ ಸೀಮೆಯಲಿ, ಅಧ್ಯಾತ್ಮ ಭೂಮಿಯಲಿ
ಆಳುತಿಹ ಕಾಲವಿದೆ, ಅಲ್ಲಿ ನಿನ್ನ
ಸಂಸರ್ಗವೇನಿಲ್ಲ? ನಾನೆ ನಾನಾಗಿರುವೆ;
ನಗೆಯೊಲವು ಬಗೆಗೆಲವು ಮಾತ್ರ ಚಿನ್ನ.

---

## ೧೮. ಚಂದ್ರೋದಯ.

೧

ದಿನದಕೊನೆ ಮುಸ್ಸಂಜೆಗಾಗೆ, ರವಿಯಡಗೆ
ಜನಮನವ ಕತ್ತಲೆಯು ಕವಿಯೆ, ಧರೆಯುಡುಗೆ
ಮನೆಮನೆಗೆ ಸೊಡರು, ತಾರಕಿಗಳಭ್ರದಲಿ
ಮಿನುಗೆ, ಬೆಳ್ಳಿಯ ಬಿಂಬವುದಿಸೆ ಹರುಷದಲಿ;

೨

ಅಗಲಿಕೆಯ ವಿರಹದುರುತಪದ ಫಲವಾಗಿ
ಸೊಗವನೀಯಲು ಜೊನ್ನವಕ್ಕಿಗಳು ಬೇಗಿ
ಮುಗಿದನೈದಿಲೆಯೆದೆಯ ಬಿಚ್ಚಿ, ನಗುತಿರಲು
ಹಗಲಿಗಿಂತಲು ಮಿಗಿಲೆ? ಎನ್ನಿಸಿತು ಇರುಳು!

೩

ಕತ್ತಲೆಯನಳಿಸಿರುವ ವಿಜಯಕೇತನವು
ಎತ್ತಿ ಕಾಣುವುದೆದೆಯೊಳಹುದೆ ಲಾಂಛನವು;
ಮುತ್ತಿಬಹ ಮುಗಿಲೋಳಿಯೊಳಗಿಂದ ಹಾದು
ಚಿತ್ರರಿಸುವೆಯ ಬುವಿಗೆ ಸಂದೇಶವೊರೆದು.

೪

ಪಡುಗಡಲ ತೀರದಲಿ ಮುಳಲೊಟ್ಟಿಲಲ್ಲಿ
ಕುಳಿತು, ಮೋಡಗಳಿರದ ಗಗನಾಂಗಣದಲಿ
ಬೆಳಗುತಿಹ ನಿನ್ನ ಸೊಬಗೆಲ್ಲ ತೆರೆಗಳಲಿ
ನಲಿನಲಿದು ಬರುವುದನು ಕಂಡೆ ಹರುಷದಲಿ.

೫

ನೆಲ, ಗಾಳಿ, ಮರ, ಹಕ್ಕಿ ಜೀವ ಜಾಲಗಳು
ಬಿಸಿಲ ಜಳದಲಿ ಹಗಲು ನೊಂದನೋವುಗಳು
ತಂಬೆಳಕು ತಂಗಾಳಿಯುಲಿ ಮಾಯವಾಗಿ
ಮರುಚೇತನವ ತುಂಬುವೆಯು ಪೂರ್ಣವಾಗಿ.

---

## ೧೯. ಧನ್ಯಬಾಪೂಜಿ

ಹಿಂದಿದ್ದ ಹಿಂದುಗಳ ಮುಂದೆ ತಂದೆ
ಕಂದಿದಾ ಮೊಗಸಿರಿಗೆ ನಲವ ತಂದೆ
ನೊಂದವರ ಬೇಗುದಿಯನೊರಸಿ ತೆಗೆದೆ ।
ಧನ್ಯ ಬಾಪೂಜಿ ಭಾರತದ ತಂದೆ ॥ ೧ ॥

ಭಾರತವೆ ತನ್ನ ಮನೆ, ತನ್ನ ಸಂಪತ್ತು;
ಭರತ ಪುತ್ರರೆ ತನ್ನ ಸೋದರರು ಸೊತ್ತು;
ಹಸಿವು-ತೃಷೆ, ಅಧ್ಯಾತ್ಮ-ರಾಜಕೀಯಗಳು ।
ಧನ್ಯ ಬಾಪೂಜಿ ಭಾರತದ ತಿರುಳು ॥ ೨ ॥

ವಿಶ್ವಮಾತೆಯು ಭಾರತಾಂಬೆ ವಿಶ್ವನುತೆ,
ವಿಶ್ವಕಾದರ್ಶ ಪುತ್ರರ ಪಡೆದ ಖ್ಯಾತೆ,
ಪರದಾಸ್ಯಹಾಸ್ಯ ಜೀವಿತದಿ ದಿನಕಳೆಯೆ ।
ಧನ್ಯ ಬಾಪೂಜಿ ಬೆಳಗಿದೆ ಶಿವಿುರವಳಿಯೆ ॥ ೩ ॥

ಸತ್ಯ, ಪ್ರೇಮ, ಅಹಿಂಸೆ, ಭಕ್ತಿ, ಶ್ರದ್ಧೆಯನು,
ನಿತ್ಯವೂ ಬೋಧಿಸಿದೆ, ಸಾಧಿಸಿದೆ ನೀನು,
ಅಸಹಕಾರದ ಶಸ್ತ್ರ, ಸತ್ಯಾಗ್ರಹಾಸ್ತ್ರ ।
ಧನ್ಯ ಬಾಪೂಜಿ ನೀನು ಸಹಸ್ರ ವಕ್ತ್ರ ॥ ೪ ॥

ದೇಶದಾದ್ಯಂತ ಸಂಚಾರವನು ಮಾಡಿ,
ಮಾಸಿಗೊಂಡಿಹ ಸರ್ವಸೋದರರ ನೋಡಿ,
ಮರುಕದಿಂದವರೇಳ್ಗೆಗತಿ ಪಂಥ ತೊಟ್ಟು ।
ಧನ್ಯ ಬಾಪೂಜಿ ಸರ್ವರಗೈದನೊಟ್ಟು ॥ ೫ ॥

ಓದುಬರೆಹಕೆ, ಮಾತೃಕತೆಗೆ, ಐಕ್ಯತೆಗೆ,
ಸಾಧನೋನ್ನತಿಯು ಸತ್ಕೃತ್ಯ ಸಂಗತಿಗೆ,
ಭೇದತಂತ್ರದಿ ಪರರು ಹಾದಿ ತಪ್ಪಿಸಲು ।
ಹಾದಿ ತೋರಿತು ಧನ್ಯ ಬಾಪೂಜಿಯುಳಲು ॥ ೬ ॥

ಹಿಂದು, ಮುಸಲರು, ಕ್ರಿಸ್ತ, ಸೀಕರಿವರೆಲ್ಲ,
ಒಂದೆ ತಾಯ್ಮಕ್ಕಳಿವರಲಿ ಭೇದವಿಲ್ಲ;
ಹೀನದೀನರನು ಹರಿಜನರೆಂದು ಎತ್ತಿ ।
ಧನ್ಯ ಬಾಪೂಜಿ ಭಾರತದಮುಲಶಕ್ತಿ ॥ ೭ ॥

ತ್ಯಾಗ ಯೋಗದ ತಪೋ ಮೂರ್ತಿನೀ ಜನಿಸಿ
ಭೋಗಾಭಿಲಾಷೆಗಳ ಪಾತಾಳಕಿಳಿಸಿ
ಕರ್ಮ-ಧರ್ಮ ಸಮನ್ವಯದ ಧರ್ಮಸಾರಿ ।
ಧನ್ಯ ಬಾಪೂಜಿ ಸ್ವಾತಂತ್ರ್ಯ ಸಿರಿ ॥ ೮ ॥

ಪರತಂತ್ರದಡಸೇರಿ ಪರರ ಬಂಧನದಿ,-
ಮೆರೆವ ಭಾರತ ಜೀವನಾವೆಯನು ಮುದದಿ,
ಕರ್ಣಧಾರತ್ವದಿಂ ಸ್ವಾತಂತ್ರ್ಯ ದಡಕೇ ।
ಧನ್ಯ ಬಾಪೂಜಿ ತಂದೊಯ್ದು ಯುವಸರಕೇ ॥ ೯ ॥

ಧರ್ಮ ದೇವರ ಸೇವದಿ ಸ್ವಾರ್ಥ ಸಾಧನೆಯು,
ದುರ್ಮದರನಸ್ಪೃಶ್ಯತೆಯುಲಿ ಭಂಜನೆಯು
ಗೈದೆ, ನವಯುಗ ಧರ್ಮ ಸ್ಥಾಪನಾಚಾರ್ಯ ।
ಧನ್ಯ ಬಾಪೂಜಿ ಭಾರತದಮಲ ಸೂರ್ಯ ॥ ೧೦ ॥

ಸಿರಿಸುರೆಗೆ ಸೆರೆಯಾಗಿ ಆತ್ಮೋನ್ನತಿಯನು
ಮರೆತ ಸೋದರರ ಪರಿಭವದ ಮರುಕವನು,
ಅರುಹುತೆಲ್ಲರ ಕಣ್ಣ ತೆರೆದು ಬೋಧಿಸಿದಾ ।
ಧನ್ಯ ಬಾಪೂಜಿ ಎರಡನೆಯ ಬುದ್ಧಾ ॥ ೧೧ ॥

---

## ೨೦. ಸಾಗುತಿರುವುದು ಎಲ್ಲಿಗೆ?

ಬರುವಕಾಲವೆಂಥ ಕಾಲ? ಸಾಗುತಿರುವುದೆಲ್ಲಿಗೇ?
ರಾಮರಾಜ್ಯ, ಸತ್ಯಯುಗವು! ಇದು ದಿಟವೋ ಹೇಗೆ?

೧

ಪ್ರೇಮವಿಲ್ಲ, ಕಾಮವೆಲ್ಲ
ತ್ಯಾಗವಿಲ್ಲ, ಭೋಗವೆಲ್ಲ
ಭಕ್ತಿಯಿಲ್ಲ, ಶಕ್ತಿಯೆಲ್ಲ
ಸ್ವಾರ್ಥವೇ, ಪರಾರ್ಥವಿಲ್ಲ । ಸಾಗುತಿರುವುದೆಲ್ಲಿಗೇ?

೨

ಹಿಂಸೆಯೇ, ಅಹಿಂಸೆಯಿಲ್ಲ
ಮಿಥ್ಯೆಯೆಲ್ಲ, ಸತ್ಯವಿಲ್ಲ
ಅಳಿವುಯೆಲ್ಲ, ಉಳಿವು ಇಲ್ಲ
ಕಠಿಣವೆಲ್ಲ, ಕರುಣೆಯಿಲ್ಲ । ಸಾಗುತಿರುವುದೆಲ್ಲಿಗೇ?

೩

ಧರ್ಮವಿಲ್ಲ, ಅಧರ್ಮವೆಲ್ಲ
ಮುಕ್ತಿಯಿಲ್ಲ, ಯುಕ್ತಿಯೆಲ್ಲ
ಒಲುವೆಯಿಲ್ಲ, ಬಲುಮೆಯೆಲ್ಲ
ಮಂತ್ರವಿಲ್ಲ, ತಂತ್ರವೆಲ್ಲ । ಸಾಗುತಿರುವುದೆಲ್ಲಿಗೇ?

೪

ಧನವು ಮಾನ್ಯ, ಗುಣವು ಶೂನ್ಯ
ವಿನಯವಿಲ್ಲ, ವಿಭುಗಳಿಲ್ಲ
ಜೀವ ದಯೆಯು ದೀನ ಹೀನ
ರಲ್ಲಿ ಯಾರಿಗಿಲ್ಲವಲ್ಲ—ಸಾಗುತಿರುವುದೆಲ್ಲಿಗೇ?

೫

ಇಂದ್ರಿಯಗಳ ಸುಖವೆ ನರನ
ಗುರಿಯು, ಹಿರಿಯಭಾಗ್ಯವೆಂದು
ಹೆಣ್ಣು–ಹೊನ್ನು ಎರಡು ಕಣ್ಣು
ಗಂಡುಮುಖದೊಳಿರಲು ನಾವು—ಸಾಗುತಿರುವುದೆಲ್ಲಿಗೆ?

೬

ಸ್ವರ್ಗಸುಖದಿ ಧನಿಕನಿಹನು,
ನರಕದಲ್ಲಿ ಬಡವನಿಹನು,
ಒಂದೆ ಲೋಕದೊಳಗೆ ಭೇದ—
ವರಿಯೆ? ದೇವನಿದಿರು ನ್ಯಾಯ? ಸಾಗುತಿರುವುದೆಲ್ಲಿಗೆ?

೭

ಪಾಪ ಭೀತಿ, ಪುಣ್ಯ ಪ್ರೀತಿ,
ಗುರುವು ಹಿರಿಯರಲ್ಲಿ ಭಕ್ತಿ,
ಧರ್ಮ–ದೇವರಲ್ಲಿ ನೆಚ್ಚು
ಯಾರಿಗಿಲ್ಲ; ಬರಿಯ ಹುಚ್ಚು; ಸಾಗುತಿರುವುದೆಲ್ಲಿಗೇ?

೮

ಮೂಡುಬೆಳಕು ಹರಿವ ಮುನ್ನ
ಕೋಳಿಕೂಗಿ ಕರೆವ ಮುನ್ನ
ಕತ್ತಲೆಯಲಿ ಪಡುವ ಬನ್ನ
ದಂತೆ ಕಳೆದು ಬವಣೆ ಮುಂದೆ। ಸಾಗುತಿಹೆವು ಬೆಳಕಿಗೇ!

೯

ಜೀವ ದಯೆಯೆ ಜೀವವಾಗಿ,
ಧೈರ್ಯಶೌರ್ಯದೇಹವಾಗಿ,
ಸತ್ಯವೊಂದೆ ಹೃದಯವಾಗಿ,
ಮಿಂಚಿನಂತೆ ವೇಗವಾಗಿ । ಸಾಗುತಿಹೆವು ಬೆಳಕಿಗೇ!

## ೨೧. ವೀರಮಾತೆ ಕುಂತಿದೇವಿ

ವೀರಮಾತೆಯೆ! ಕುಂತಿದೇವಿ! ನಿನ್ನಯ ಸುತರು
ಭಾರತದ ನಾಯಕರು; ವೀರರತಿ ಗುಣಯುತರು;
ಮಾನವನ ಶಕ್ತಿಯನು ಮೀರಿ ಸಾಹಸತೋರಿ,
ಸುರನರರ ಬೆರಗುಗೊಳಿಸಿದ ದಿವ್ಯಜ್ಯೋತಿಗಳು;
ಭಕ್ತಿಯಲಿ ಶ್ರೀಹರಿಯ ನೆರೆಗೈದಿಹರು, ಶಿವನ
ಶಕ್ತಿಯಲಿ ಮೆಚ್ಚಿಸಿದರೆಲ್ಲ ದಿಕ್ತಟಗಳಲಿ
ಕೀರ್ತಿರವ ಮರುನುಡಿಯೆ ವರವ ಪಡೆದಿಹೆ ನೀನೆ
ಧನ್ಯೆ, ಸುರನರಮಾನ್ಯೆ! ಸರ್ವಸಂಪನ್ನೆ!
ನಿನ್ನ ಪಡೆದವನೊಬ್ಬ, ಸಲಹಿದವನಿನ್ನೊಬ್ಬ,
ಕನ್ಯೆಯಾಗಿರಲೊಂದು ಕೋಲ್ಮಿಂಚು ಹೊಡೆಯಿತೇ?
ಆಟವೆಂದರೆ ಕಾಲಕೂಟದಂತಾಯಿತೇ? ನುಡಿಮಾತೆ!
ರೂಪ, ಗುಣ, ಸಂಪತ್ತು, ಕುಲ, ಗೌರವಗಳಲ್ಲಿ
ಕುಂದಿಲ್ಲದಿಹ ರಾಜಕುವರಿಯಾಗಿಹ ನಿನಗೆ
ಪಾಂಡುವರ್ಣದ, ಸಿಂಹಪೀಠವಿಲ್ಲದ, ಮುನಿಯ
ಪಾಪ ಪಡೆದಿಹ ಪತಿಯೆ? ಸವತಿಯೊಬ್ಬಳು ಬೇರೆ;
ಮನಮನೋಹರವಾದ ಹಂದರದಿ, ಮನ್ಮಥನ
ರಥದಂತಿರುವ ಮಂಡಪದಿ ಪಾಂಡುಪುತ್ರನನು
ವರಿಸಿರುವ ಶುಭಮುಹೂರ್ತದಿ ನಿನ್ನ ಸುಮ ಹೃದಯ
ಸವಿಗನಸುಗಳನೆನಿತು ಕಂಡುಂಡು ತಣಿದಿಲ್ಲ!
ದೀನ ಪತಿತರು ಪಡೆವ ವಿವಿಧ ಯಮಯಾತನೆಯ

ದುಃಸ್ವಪ್ನದೆಣಿಕೆಗನುವೆಲ್ಲಿ ವೀರರಮಾತೆ?
ನಿನ್ನ ಹೃದಯೇಶ್ವರನ ಪ್ರೇಮಾಮೃತಕೆ ಭಾಗಿ
ಯಾಗಿ ಬಂದಳು ಮಾದ್ರಿ! ಕರುಬಲಿಲ್ಲದಕೆ ನೀ.
ಜೀವನದಿ ಸತಿಪತಿಯರೊಂದಾಗಿ ವಿಹರಿಸುತ
ಸುಮಶರದನೋವ ಸಂತವಿಸುತ್ತ, ತವಿಸುತ್ತ-
ಲಿರುವ ಹರಯದಿ, ವನದ ಸಹಜ ಸೌಂದರ್ಯದಲಿ,
ಮುನಿಶಾಪವನೆ ನೆನೆದು, ಪತಿಯ ಸಾನ್ನಿಧ್ಯದಲಿ,
ಜನನಿ! ಮನವನು ತಡೆದು ದಿನವ ದೂಡಿದೆಯೆಂತು?
ಮುನಿಯಿತ್ತ ಮಂತ್ರೋಪದೇಶದಲಿ ನಿನ್ನಂತೆ
ಸುತರ ಪಡೆದಳು ನಿನ್ನ ಒಲುಮೆಯಲಿ ಸತಿ ಮಾದ್ರಿ;
ಪತಿಯ ಚಿತೆಯಲಿ ಮಡಿದ ಮಾದ್ರಿಸುತರನು ನಿನ್ನ
ಸುತರೆಂದು ಪ್ರೀತಿಯಲಿ ಲಾಲಿಸಿದೆ ಪಾಲಿಸಿದೆ;
ವನದಿಂದ ಮಕ್ಕಳೊಡಗೂಡಿ ಹಸ್ತಿನಪುರಕೆ
ಬಂದೆ, ನೂರಾರು ಮಕ್ಕಳು ಕೂಡಿ ಆಡಿ ಬೆಳೆಯುತ್ತಿರಲು
ಪತಿವಿಯೋಗದಿ, ವಿಪಿನವಾಸದಲಿ ನೊಂದೆದೆಯು
ಒಲವೇರಿ ಕುಸುಮಿಸಿತು; ದಾಯಾದ್ಯ ಮತ್ಸರದ
ಕಿಡಿಯರಳಿ ಹರಡುತಿರೆ ಓ ಮಾತೆ! ಮರುಗಿದೆಯ?
ದ್ಯೂತದಲಿ ಸರ್ವವನು ಸೋತು ನಗರವನಗಲಿ
ವನವೆ ಸಾಮ್ರಾಜ್ಯವಾಗಲು, ಪತಿಯೊಡನೆ ಹಿಂದೆ
ನವೆದ ವೇದನೆಯು ಮರುಕೊಳಿಸಿತೇ ಹೃದಯದಲಿ?
ಮುರಹರನ ಸಂಧಿ ಮುರಿಯಲು, ಧುರವೆ ದಿಟವಾಗೆ,
ಹಿರಿಯಮಗ ಕರ್ಣನೆಡೆಗೈದಿದೆಯ ಮಮತೆಯಲಿ!
ಕನ್ಯೆಯಾಗಿರೆ ಪಡೆದು ಎತ್ತಿ ಮುದ್ದಿಸಿ, ಜನರ
ಜರು ನುಡಿಯ ಭಯಕೆ ಗಂಗೆಗೆ ಬಿಸುಟು ದುಃಖದಲಿ
ಹೊರಟಿಂದಿನಿಂದುವರೆಗಾಸುತನ ಮೋಹವನು
ಒಮ್ಮೊಮ್ಮೆ ಕಂಡು ಸಂತಸಗೊಂಡೆ! ತನ್ನುದರ
ದಿಂದೊಗೆದ ಸುತರು ರಣಕಣದಲ್ಲಿ ತಮ್ಮೊಳಗೆ
ಕಾದುವುದ ಸಹಿಸದೆಯೆ, ಬೇಸರದೊಳಾತನಕ

ಆರಿಗೊರೆಯುದ ಪೂರ್ವಕಥೆಯು ಕರ್ಣಗೆ ನುಡಿದೆ;
ಕರುಳುಕರಗುವ ತನ್ನ ಮರುಕವನು ತೋರಿಸಿದೆ!
ಪೊರೆವ ಕೈಬಿಸುಟುದಕೆ ಪರಿತಪಿಸಿ ಶೋಕಿಸಿದೆ!
ವೀರಮಾತೆಯು ವೀರಕುವರ ಕರ್ಣನು ನುಡಿದ
ಮರುನುಡಿಯು ಸಿಡಿಲು, ಮಮತೆಯು ಮಳೆಯೊಡನೆ ಕೂಡಿ
ನಿನ್ನ ಹೃದಯವ ತಿವಿದು, ಬಿಗಿದಪ್ಪಿ ಶೋಕಿಸಿತೆ?
"ರಾಧಾತನಯನಾಗಿ ಸ್ಥಿರವಚನನೆಂದೆನಿಸಿ,
ಪುರುಷಸಿಂಹರ ಪಡೆದ ನಿನ್ನುದರದಲಿ ಜನಿಸಿ
ಸತ್ಯಬಾಹಿರನೆನಿಸಬೇಕೆ? ನಿನ್ನೈವರನು
ವಧಿಸಲಾರೆನು; ಸುಯೋಧನನ ಜಯಕಾಗಿ ರಣ-
ಭೈರವಿಯುನಪ್ಪಿ ದೇಹವನಿಡುವೆ; ನಡೆ ಜನನಿ!"
ಸಮರವಡಬಾನಲನು ಕುರುಕುಲದ ಸಾಗರವ
ನುಂಗಿನೊಣೆಯಲು, ರತ್ನಸಿಂಹಾಸನವನೇರಿ
ಹಿರಿಯಮಗ ಧರ್ಮಜನು ಸಾಮ್ರಾಜ್ಯದೊಡೆತನವ
ನಿರ್ವಹಿಸಲಾನಂದಲಹರಿಯಲಿ ವಿಹರಿಸಿದೆ;
ಸಂಸಾರಜೀವನದ ಸುಪ್ರಭಾತದ ಕನಸು
ಓಮಾತೆ! ನೆನಪಾಗಲಪ್ಪಿ ಮುದ್ದಿಸಿ ಹರಸಿ
ಆನಂದಬಾಷ್ಪದಭಿಷೇಕ ಗೈದೆಯು!
ಸಂಸಾರ ಸಾಗರದ ಮಥನದಲಿ ವಿಷವುದಿಸೆ,
ಕಂಗೆಡದೆ ಧೈರ್ಯದಲಿ ಶಾಂತಿ ಸಹನೆಗಳಲ್ಲಿ,
ಸತ್ಯ ಪ್ರೇಮಗಳಿಂದ ಸಾಗಲಮೃತವ ಪಡೆದು
ತನುವಿಗಳಿವಾದೊಡೇಂ, ಉಳಿವ ಸವಿನೆನಹು ಚಿರ;
ನಿನ್ನ ಜೀವನದ ಸಂದೇಶವಿದು ನಮಗೆ ವರ!

## ೨೨. "ನಿನ್ನನರ್ಚಿಸುವುದೆಂತು"

೧

ನಿಷ್ಕಾಮ ಕರ್ಮವೋ ನಿನ್ನ ಪೂಜೆಯ ಪುಷ್ಪ?
ಸೌರಭವ ಸೂಸುತಿಹ ಬಿರಿದ ಸುಮರಾಶಿಗಳೊ?
ಗಂಗಾಜಲವೊ ನಿನ್ನ ಮೀಯಿಸುವ ತೀರ್ಥ
ಪ್ರೇಮದೊರತೆಯ ಜಲವೊ ಪೇಳಿದರ ಅರ್ಥ!

೨

ನಿರ್ಜೀವ ಹುಳದೆಲುಬೊ ನಾನು ಊದುವ ಶಂಖ?
ಭಕ್ತಿ ಗದ್ಗದಿತ ಕಂಠಸ್ವನವೊ ಕೀರ್ತನವೊ?
ತುಪ್ಪದಿಂದುರಿಸಲೋ ಬೆಳಗಿಸಲು ದೀಪ?
ಸುಜ್ಞಾನ ಜ್ಯೋತಿಯನ್ನಿಡಲೊ ಹೇಳಪ್ಪ!

೩

ಮರದ ತುಂಡನು ಸವೆದು ಧರಿಸಲೊ ಪ್ರಸಾದವನು?
ಅದುವೇಕೆ? ನೀಡೆನಗೆ ಆತ್ಮದಾಹ್ಲಾದವನು!
ಚಿನ್ನ ಬೆಳ್ಳಿಯ ನಾಣ್ಯಕಾಣಿಕೆಯನಿಡಲೋ?
ಧ್ಯಾನದೊಂದೇ ದಿವ್ಯ ಕಾಣಿಕೆಯ ಕೊಡಲೋ?

೪

ಜಡೆಯ ಮುಡಿಗಟ್ಟಲೋ? ಜಡತನವನಳಿಸಿರುವ
ಕುರುಹು ಮುಡುಪಾಗಿಡಲೊ? ರುದ್ರಾಕ್ಷಿ ಮಾಲೆಗಳ
ಧರಿಸಿಕೊಳ್ಳಲೊ? ಸುಗುಣ ಮಣಿಗಳನೆ ಕೋದು
ಕೊರಳಿಗಿಡಲೋ ವ್ಯಕ್ತದನುಭವವ ಹಾದು!

೫

ದಂಡವನು ಪಿಡಿಯಲೋ, ತನು ಮನಸು ವಾಕ್ಯದ ತ್ರಿ
ದಂಡವನು ಪಿಡಿಯಲೋ? ನಾರುಡೆಯನುಡಲೋ, ವಿ-
ಚಾರದುಡೆಯನ್ನುಡಲೊ ಸನ್ಯಾಸಿಯಾಗಿ
ಫಲದಾಶೆ ಸನ್ಯಾಸದಿಂದಿರಲೊ ನೀಗಿ.

೬

ಅರಿತರಿತೆ! ಸನ್ಯಾಸಿಯಾಗಿ ತೊರೆವುದು ಬೇಡ!
ಗುಡಿದೇಗುಲಂಗಳಲಿ ಪೂಜೆಗೈವುದು ಬೇಡ!
“ನಿರ್ಮಲ ಸಸಿಕ್ಷಯದ ಮನದಿಂದ ಸುಗುಣಿ,
ಎನಿಸಿ ಬಾ ಬಳಿಗೆನ್ನುವುದು ನಿನ್ನ ವಾಣಿ!”

---

## ೨೩. ಮನಸು

ಮೇರೆಯಿಲ್ಲ ದೂರ ಸೇರಿ
ಮನವು ಮರಳಿ ಬರುತಿದೆ;
ಹೊಸ ಜನುಮಕೆ ಹೊಸ ನೆನಪನು
ಹೊಸೆದು ಹೊಸೆದು ತರುತಿದೆ.

೧

ಬಾನಿಗೇಣಿ ಮಾಡಲೆಂದು
ಗೇಣು ಬಿದಿರ ತಂದು ನಿಂದು
ಬೇಡಿ ಕಾಲು ಹಿಡಿವುದು
ಆಗಸದಲಿ ಹಾರಲೆಂದು
ಹೋಗಿ ರೆಕ್ಕೆಗಳನು ತಂದು
ಒಡನೆ ಎನಗೆ ನುಡಿವುದು

೨

ಮನದ ಮಾತ ಮನೆಯನಾಥ
ನೆನೆದ ನಿಲ್ಲವೇನೊ ಇಂಥ
ಕನಸಿನೊಡಲಿನಾಸೆಯು
ಆಸೆ-ಮನಸು ದಂಪತಿಗಳು
ಹಾಸ ಮದುವೆ ಮಂಡಪದೊಳು
ಪಡೆಯೆ ಕರಣ ಸೇಸೆಯು

೩

ಚಿಂತೆಯಲ್ಲಿ ಮನವು ಮುದುರಿ,
ಸಂತಸದಲಿ ಮರಳಿ ಚಿಗುರಿ,
ಹೊಸತು ಫಲವ ನೀಡದೇ?
ಮನಕೆ ಮರಣವೆಲ್ಲಿ ದೇವ!
ನಿನಗೆ ಲೀನ, ಚಿರಂಜೀವ—
ವೆನಿಸಿ ನಿನ್ನ ಕೂಡದೇ?

೪

ದಾರದಿಂದ ಮನ ಪತಂಗ
ಹೃದಯ ಕುಸುಮ ತೋಟ್ಟಿನಲ್ಲಿ
ಕಟ್ಟುವಡೆದು ಹಾರ್ವುದು;
ಹಾರಿ ಹಾರಿ ಬಳಲಿ ಬಳಿಕ
ಬಳಿಯ ಕುಸುಮದೊಡಲ ಪುಳಕ
ದಿಂದೆ ಮಧುವ ಹೀರ್ವುದು!

ನೀರೆಯಿಲ್ಲದೂರ ಸೇರಿ,
ಮನವು ಮರಳಿ ಬರುತಿದೆ;
ಹೊಸ ಜನುಮಕೆ ಹೊಸ ನೆನಪನು
ಹೊಸೆದು ಹೊಸೆದು ತರುತಿದೆ
ತಂದು ತುಂಬಿ ತುಂಬಿಯಂತೆ
ಕಡೆಗೆ ಶಾಂತಿ ಪಡುತಿದೆ.

---

## ೨೪. ಮನವಿ

ಭುವನವೆಂಬ ಭವನದಲ್ಲಿ ಎನ್ನ ಕರೆದು ನಿಲಿಸಿದವನೆ
ನಿನ್ನ ಪಾದಕೆರಗಿ ವಿನಯದರಿಕೆಗಳನು ಮಾಡುವೇ ॥ ಪಲ್ಲ ॥

ಅರಳುತಿರುವ ಎದೆಯ ಮುಗುಳು ತನ್ನ ಕಂಪನೆರಚುತಿರಲಿ
ಸ್ವಾರ್ಥ ಪ್ರೇಮದಿಂದ ಮರೆಸದಿರಲಿ ತನ್ನ ಒಡಲಲೀ ॥
ಆತ್ಮವೆಂಬ ಮುದ್ದು ಮಗುವು ನುಡಿವ ತೊದಲು ವಚನಗಳನು
ಎದ್ದು ಬಿದ್ದು ಬಳಲುತಿರುವ ಮನದ ಕಿವಿಯು ಕೇಳುತಿರಲಿ. ॥ ೧ ॥

ಚಂದ್ರನಂತೆ ಶಾಂತಿಯುದಿಸಿ ಬಂದು ಇರುಳ ಕಳೆಯುವಾಗ
ಸಂಶಯಗಳ ಕಾರ್ಮುಗಿಲಲಿ ಚಂದ್ರನವಿತುಕೊಳ್ಳದಿರಲಿ ॥
ಪಾಪವೊಂದು ರೂಪವಾಂತು ತನ್ನನಂಜಿಸುತ್ತ ಬರಲು
ಅದರೊಳವಿತ ನಿತ್ಯಸತ್ಯದೊಲವು ಮನವರಿಕೆಗೆ ಬರಲಿ. ॥ ೨ ॥

ಮನದಿ ಮೊಳೆತು ಕ್ಷಣಕೆ ಸಾವಿರಾರು ರೂಪವಾಂತು ನಿಲುವ
ದುರ್ವಿಕಲ್ಪನೆಗಳು ಹುಟ್ಟಿದಲ್ಲೆ ಇಂಗಿ ಹೋಗಲಿ ॥
ತನ್ನ ತೀವ್ರ ಗಮನವನ್ನು ತಡೆವ ಮೋಹ ಮಾಯ ಲೀಲೆ
ಎನ್ನ ಕಣ್ಣ ತೆರೆಯುತೆಚ್ಚರಿಸುತ ಮುರಿದು ಬೀಳಲಿ. ॥ ೩ ॥

ಕದಡಿ ಹೋದ ಮನವು ಆತ್ಮಶಾಂತಿಯಿಂದ ಬೆಳಗುತಿರಲು
ಚಿತ್ತ ಶುದ್ಧಿಗೈವ ಸ್ವಾತ್ಮಶಾಂತಿ ಸ್ಥಿರಂಜೀವವಿರಲಿ ॥
ನರರನೆಲ್ಲನೆಂಟರೆಂದು ಬಗೆವ ಪೂರ್ಣ ಪ್ರೇಮ ಧರ್ಮ
ಮೊಳೆತರೇನು, ನಿನ್ನ ದಯದಿ ಚಿಗಿತು ಬೆಳೆದು ಫಲವ ಕೊಡಲಿ.

ಮತ್ಸರಾದಿ ವೈರಿ ವರ್ಗವಿರುವ ಕುರುಹು ಕೂಡಯಿರದೆ
ನಿತ್ಯ ಮುದವು ಮನೆಯ ಮಾಡಿ ಚಿತ್ತದೊಳಗೆ ನೆಲಸಿಕೊಳಲಿ ॥
ಭಕ್ತಿ ಧ್ಯಾನವೆಲ್ಲ ಬಲಿತು ಜ್ಞಾನ ಸೂರ್ಯನುದಿಸುವಂತೆ
ಕಾಳರಾತ್ರಿಯೆಂಬ ಮಸಿಯ ತೊಡೆದು ಶುಚಿಯುಗೊಳಿಸುತಿರಲಿ. ॥ ೫ ॥

---

## ೨೫. ಹೃದಯ ಪೂಜೆ

೧

ಹೃದಯದ ಗುಡಿಯಲಿ ಸದಮಲಗಂಟೆಯು
ಝೋಂಕಾರವನೀಯುತ್ತಿಹುದು
ಜ್ಞಾನದ ಜ್ಯೋತಿಯು ದುಗುಡದ ತೈಲದಿ
ಕೆಂಗಿಡಿಗಳನದೊ ಕಾರುವುದು.

೨

ಭಜನೆಯ ಮಂತ್ರದಿ, ನಿಜತೆಯ ತಂತ್ರದಿ
ಘೋಷದಿ ಕಿವಿಕಿವುಡಾಗುವುದು
ಸಚ್ಚಿತ್ತಾರ್ಚಕ ಪುಣ್ಯದತೊರೆಯಲಿ
ಪಾಪದಕೊಳೆಯನು ತೊಳೆಯುವನು.

೩

ಶ್ರದ್ಧೆಯವಾದ್ಯವು ವಿಷಯದ ತೃಷೆಯನು
ತಣ್ಣೆಲರಂದದಿ ತಣಿಸುವುದು;
ಭೀಕರಮನವನು ಕುಣಿಸುವುದು;
ಶಾಂತತೆ ಇದು ಎಂದೆನಿಸುವುದು.
ಕರುಣೆಯ ಕರ್ಪುರದಾರತಿಯುರಿವುದು
ಗಂಧದಿಹೃದಯವು ನನೆಯುವುದು.

೪

ಇಂದ್ರಿಯದಿಚ್ಛೆಗಳೆಂಬುವುದಗಣಿತ
ಬಂದಿಹವಿಲ್ಲಿಗೆ ಕೈಮುಗಿದು;
ಪರ್ಯವಸಾನದ ಕಾಣಿಕೆಕೊಡುವವು
ಮನಸಿನ ಹಂಕೃತಿಗಳ ಸಿಗಿದು;
ದಣಿದವು ವಿಷಯದಿ ಪುಟನೆಗೆದು
ಪರಿತಪಿಸುತ ಕಣ್ಣೀರೊಗೆದು;
ಗರ್ಭಗೃಹದಲಿ ಪ್ರಜ್ವಲಿಸುತ್ತಿಹ
ನಿನ್ನಲಿಮನವನು ಮೊಗೆಮೊಗೆದು.

---

## ೨೬. ಇದುವೆನ್ನ ಹೃದಯಭೂಮಿ

ಇದುವೆನ್ನ ಹೃದಯಭೂಮಿ । ದೇವಾ
ನೀನಿದನು ಪೊರೆವಸ್ವಾಮಿ

೧

ರವಿಯುದಿಸಿ ಹಗಲಾಗಿ
ಮುಳುಗಿದರೆ ಇರುಳಾಗಿ
ಹೊಗಳಿಕೆಗಳುವನುಡಿಗೆ ಮಾರುಹೋಗಿ
ಅರಳಿ, ಕ್ಷಣದಲಿಬಾಡಿ
ಜೋಲು ಮೋರೆಯಮಾಡಿ
ನಿನ್ನಕಾಣುವ ಸಮಯವಿಲ್ಲ ಬಡವಾಗಿ.

೨

ಬೇಸಗೆಯ ಸುಗ್ಗಿಯಲಿ
ಚಿಗುರೊಡೆವ ಮುಗ್ಗಿಯಲಿ
ಸಂಚರಿಸಿ ಪ್ರೇಮಸುಧೆ ಕುಡಿಯಲಿಲ್ಲಾ.
ಮಾಗಿಯಲಿ ಕಳೆನೀಗಿ-
ದೊಡಲು ಸರಸದಿ ಬೀಗಿ
ನಿನ್ನ ಶಾಂತಿಯ ಕಡಲನೊಡೆಯಲಿಲ್ಲಾ.

೩

ಹರಿವ ಕಲಕಲ ರವದ
ತಿಳಿವೊನಲು, ಈ ಭವದ
ಮಲಿನತೆಯು ತೊಳೆದು ಬೆಳಗಿಸಲೆ ಇಲ್ಲಾ.
ಗರಿಕುತಿಹ ದೀಪವನು
ಬೆಳಗಿಸುತ ತಾಪವನು
ಕಳೆದೆನ್ನ ಬೆಳಗಿಸುವ ಕೆಳೆಯನಿಲ್ಲಾ.

೪

ಹಕ್ಕಿಗಳ ಹಾಡಿಂದ
ಅಳಿಗಳಾ ಬೀಡಿಂದ
ಅರಳ ಹರುಷದಿ, ಚಿಗುರ ನಗುವಿನಿಂದ.
ಆಯ್ದು ಮಣಿಗಳನೊಟ್ಟಿ
ಭಾವ ದಾರದಿ ಕಟ್ಟಿ
ಮುಡಿಯ ಸಿಂಗರಿಸದಿರಲೇನು ಚಂದ?

೫

ವಿವಿಧ ವಿಷಯದ ಬಣ್ಣ
ನಿನ್ನರೂಪವ ಕಣ್ಣ–
ಮುಂದೆ ಭೀಕರವಾಗಿ ಚಿತ್ರಿಸಿಹುದು.
ಆಸೆಚಿತ್ರಿಕನಿಂತು
ಮೋಸ ಗೈದನಿದೆಂತು
ಮಿರುಗು ಬಣ್ಣದೊಳೆನ್ನ ವಂಚಿಸಿಹುದು.

೬

ಋತು ಭೇದದುಚಿತದಲಿ
ಗಾಳಿ ಮಳೆ ಬೆಳಕಿನಲಿ
ಪಾಲಿಸೀ ಹೃದಯಪ್ರಪಂಚವನು ನಿರತಃ;
ಲೀಲಾಮಯನೆ ನಿನ್ನ
ನೆನೆದು ತನ್ಮಯನಾಗಿ
ಮೂಲೋಕವನು ಮರೆವ ಶಕ್ತಿ ಕರುಣಿಪುದು.

## ೨೮. ಸಾತ್ವಿಕ ಪ್ರಣಯ

೧

ನಾನೆನ್ನ ಹೊಲದಬಳಿ ಕುಳಿತುಕೊಂಡಿರಲು
ಬಂದೆಯಾ ನಗೆಹೆಣ್ಣೆ! ನಲಿವ ಮುಂಗುರುಳು
ಬಳ್ಳಿದೇಹದ ವೈಗೆ ಎಸಳುಗಣ್ಣಿರಲು
ಬಾಗಿರುವ ಶಂಖದಂತಿಹ ನಿನ್ನಕೊರಳು.

೨

ನೆಲನಕಾಲ್ತುದಿಯಿಂದ ಗೀಚುತಿಹುದೇಕೆ?
ಕಡೆಗಣ್ಣನೋಟದಲಿ ಹಾಯುತಿಹುದೇಕೆ?
ನಸುನಗೆಗೆ ನಲಿವ ಕಣ್‌ಪಾಸಟಿಯೆ ಇದಕೆ?
ಉಸುರೆನಗೆ ಬಂದಿರುವ ವಿಷಯವೀಕ್ಷಣಕೆ.

೩

ಸೆರಗಿಂದ ಮೊಗವನರೆಮುಚ್ಚುವುದೆ? ನಿನ್ನ-
ಕರಗಳತ್ತಿತ್ತ ಚಲಿಸುವುದೇನು? ಎನ್ನ-
ಪರುಶನಕೆ ಬಂದುದೇಕೆಂದು ಅರುಹುವೆಯಾ?
ಹರುಷವಾಂತೆನು ತಿಳಿಸು ನಿನ್ನಸಂಗತಿಯಾ!

೪

ನಗೆಯು ನನ್ನಿಯು ನನೆಯು ಜೀವನದ ತೆನೆಯು.
ಬಾಳುವೆಯು ಬೇಳುವೆಗೆ ಮೇಲೆದ್ದ ಕೆನೆಯು.
ಹಿರಿದೆನುವ ನರಜನ್ಮವೆತ್ತಿ ನಾವಿಂದು
ಹಿರಿತನವ ತೋರದಿರೆ ಜೀವನವಸಿಂಧು.

೫

ಪ್ರಣಯ-ಶಕ್ತಿಗಳೆ ನರ-ನಾರಿಯರು ಎನಿಸಿ
ಧರೆಯೊಳುದಿಸಿವೆ; ವಿವಿಧ ಭೇದಗಳ ತ್ಯಜಿಸಿ;
ಕನಸುಮನಸುಗಳೆಲ್ಲ ಭಾವಭಿತ್ತಿಗಳು
ಹೆಣೆದುಕೊಂಡಿರೆ ಪ್ರೇಮ ಸಾಫಲ್ಯ ಮುಗುಳು.

೬

ಹುಟ್ಟಿನೊಂದಿಗೆ ಬಂದು ಬಿಡಲಾರದಿರುವಾ
ನಿತ್ಯಕರ್ಮಗಳ ಗೈಯುತ ಸಕಲ ಸುಖದಾ
ಚಿಂತೆಯನ್ನಳಿದಾವು ಅನ್ಯೋನ್ಯರಾಗಿ
ಪ್ರೀತಿಯಲಿ ರೀತಿಯಲಿ ನಡೆವ ಸುಖವಾಗಿ.

೭

ನುಡಿಗೊಪ್ಪುವೆಯು ಬಾರೆ, ಪಿಡಿಯೆನ್ನಕೈಯ!
ದೃಢತೆಯಿಲ್ಲವೆ ಹೋಗು ನಡೆಯುತ್ತ! ನಿಜವ-
ನುಡಿಯೆಂದೆ, ಬಂದಳಾಬಾಲೆ ಪ್ರೇಮದಲಿ
ಪಿಡಿದೆನ್ನನೆಬ್ಬಿಸಿದಳತಿ ಸಂತಸದಲಿ.

೮

ಜೀವನದ ಯಾತ್ರೆಯಲಿ ಸುಖದುಃಖವೆಂಬ
ಗಾಲಿಯುರುಳುವುದಬಲೆ ಮರುಗದಿರು ತುಂಬಾ,
"ಭಾವದಂತೆಯೆ ದೇವ"ನೆಂಬನುಡಿ ಸತ್ಯ
ಭಾವಿಸದಿರನ್ಯತ್ರ ಸರ್ವವೂ ಮಿಥ್ಯ!

---

## ೨೮. ಬಯಕೆ

೧

ಸಂಸೃತಿಯ ಮುಗಿಲಿನಲಿ ಚಿತ್ಸೂರ್ಯನವಿತಾಗ
ನಿನ್ನನುಗ್ರಹದ ಬಿರುಗಾಳಿಯ್ಕೈತರಲೀ;
ಎದ್ದೋಡುತಿಹೆನೆನ್ನುತಾತ್ಮಶಾಂತಿಯು ನಿಂತು
ದೈವಿಕ ಪ್ರೇಮದೊಡಗೂಡಿ ವಿಹರಿಸಲೀ.

೨

ಪರಮಾರ್ಥದಾರಿಯಲಿ ಮುಂದರಿದ ಸಾಧಕರ
ಗೆಳೆತನದ ಸಹವಾಸ ದೊರಕಿಕೊಳಲೀ;
ಪೂರ್ಣಪ್ರೇಮಧರ್ಮ ಹೂಬಿಟ್ಟು ಮಿಡಿಯಾಗಿ
ಬೆಳೆದು ಸಂಜೀವನದ ರಸದುಂಬಲೀ.

೩

ಕರದೊಳಿಹ ಜ್ಞಾನಶೂಲವು ವ್ಯಕ್ತವನು ಸೀಳಿ
ಗೋಚರಾತೀತ ದರ್ಶನವೀಯಲೀ
ವಿಷಯದಾಸಕ್ತಿಯಲಿ ಸುರಿವಶ್ರುಜಲಧಾರೆ
ಧ್ಯಾನದಲಿ ಗುಳುಗುಳಿಸಿ ಹರಿದುಬರಲೀ.

---

## ೨೯. ಮೀರೆಯ ಮೊರೆ

೧

ದೇವದೇವನೆ, ನಿನ್ನ ನೆನಹಿನೊಳಿನ್ನ ಜನುಮವೆ ಪಾವನ
ದೇವ! ತವಪದ ಸೇವೆಯಲ್ಲಿಯೆ ಸವೆಯಲೆನ್ನೀಜೀವನ
ಪಾರ್ಥಿವಾ ಸುಖವೆಲ್ಲ ನಶ್ವರ,
ವ್ಯರ್ಥ ಜನುಮವು ನಶ್ವರ,
ಶಾಶ್ವತದ ಸುಖಪಥವ ದಯದಲಿ ತೋರಿಸೋ ಪರಮೇಶ್ವರ
ವಿಶ್ವಪತಿ ನೀನಲ್ಲದುಳಿದವರಿಲ್ಲಗತಿ ಜಗದೀಶ್ವರ.

೨

ಸ್ನಾನ, ಜಪ, ತಪ, ದಾನಧರ್ಮಗಳೇನು ಕಾಣವೆ ನಿನ್ನನು?
ಧ್ಯಾನಯೋಗವೊ ಮೌನಮಂತ್ರವೊ ಮುಟ್ಟಲಾರವೆ ನಿನ್ನನು?
ತರ್ಕಶಾಸ್ತ್ರ ಪುರಾಣಗಳಿಗೇ
ಸಿಕ್ಕದವ ಬಾರೆನ್ನ ಬಳಿಗೇ
ನಿತ್ಯ, ಭಕ್ತಿ, ವಿರಕ್ತ ಹೃದಯದಿ ಮುತ್ತಿಡಲು ನಾನಿನ್ನನು
ಚಿತ್ತದೊಲ್ಲಭನಾಗಿ ಬರುತಿಹೆ ಚುಂಬಿಸಲು ನೀನೆನ್ನನು.

೩

ಅರಳಿದಲರಲಿ ಚಿಗುರಮೊಗದಲಿ ಕಂಡೆ ನಿನ್ನಯ ನಗುವನು
ಅರುಣ ನಗೆಯಲಿ ಸಂಜೆಬಗೆಯಲಿ ಕಂಡೆನಿನ್ನಯ ಮೊಗವನು?
ಹರಿದ ಹಳೆ-ಹೊಸನೆನಪುಗಳನೂ
ಸುರಿದು ಬೇಗನೆ ಹುಡುಕೆ ನಿನ್ನನು
ತಿರುತಿರುಗಿ ನೋಡುತ್ತಲೋಡುವ ವಂಚನೆಯದೇನೋ!
ವಿರಹಿಣಿಯು ನಾನೆನ್ನಪತಿನೀ ತರುಣ ವಿರಹಿತನೋ!

೪

ಬೀಜದೊಂದಂಕುರದಿ ಹೂಕಾಯ್‌ಹಣ್ಣುಗಳೆಲ್ಲವ ಧರಿಸಿದ
ಭೂಜ ರಂಜಿಸುವಂತೆ ನಿನ್ನಯ ಒಂದೆ ತತ್ವದಿ ಜನಿಸಿದ
ವಿಷಯ ವಿವಿಧತೆಗಳಿಗೆ ಸೋತು
ವಸುಧೆಗೊಡೆಯನೆ ನಿನ್ನಮರೆತು
ಮನದಿ ಹುಸಿ ಬಿನದದಲಿನಲಿದೆನದೆಲ್ಲ ನಿನ್ನಯ ಮೋಸವೋ!
ದಿನವುಕಾಣುವ ಪತಿಯ ಜನಜಂಗುಳಿಯೊಳರಿಯದ ರೀತಿಯೋ!

೫

ಎಲ್ಲಿ ನೋಡಿದರಲ್ಲಿ ನಿನ್ನಯ ಚೆಲ್ವನಗೆ ಮೊಗವಲ್ಲದೇ
ನಲ್ಲ! ನಿನ್ನಯ ಕರದ ಮುರಲಿಯ ತರಲಸುಸ್ವರವಲ್ಲದೆ
ಬೇರೆಯರಿಯದು ಕರಣಗಳಿಗೇ
ಬೇರೆಯರಿಯದಿಂದ್ರಿಯಗಳಿಗೇ.
ಧಾರುಣೀಪತಿ, ನೀನೆಭೂಪತಿ ಎನಗೆ ನಿಜಪತಿ ನಿಜಗತಿ!
ಸೇರಿ ಸೇವಿಸುವೆನ್ನ ನಿತ್ಯವು ಪಾಲಿಸೈ ಹೇ ಶ್ರೀಪತಿ!

---

## ೩೦. ನನ್ನ ಜೀವನಯಾತ್ರೆ

೧

ನನ್ನ ಜೀವನಯಾತ್ರೆಯಲಿ ನಾನು ಪಡೆದಿರುವ
ನೋವುನಲಿವುಗಳೆದೆಯ ವೀಣೆಯನ್ನು
ನುಡಿಸಿದಂದದಿ ನುಡಿದಿಹೆನು; ಗೆಳೆಯರಲಿ ಮುದವ
ಧೈರ್ಯ, ಶಾಂತಿಗಳನ್ನು ತುಂಬಬಹುದೇನು?

೨

ಹುಟ್ಟಿದೆನು ತೆಂಕನಾಡಿನ ಕಿರಿಯಹಳ್ಳಿಯಲಿ
ಆನಂದವತ್ಸರದ ಮಾಘಮಾಸದಲೀ
ಶುದ್ಧಪಂಚಮಿಯಂದು ಮೂಡುಕೆಂಪೇರಿರಲು
ಜನಿಸಿದೆನು, ಮನೆಮುಂದಿಯಿರಲು ಹರುಷದಲಿ.

೩

ಹಸುರುಬಯಲಿನ ಕೆಲದಿ, ತೆಂಗುಕಂಗಿನ ತೋಟ,
ಅಲ್ಲೆ ಹರಿಯುವ ಹಳ್ಳವದರ ಇಕ್ಕಡೆಗೇ
ಏರುತಗ್ಗಿನ ಗುಡ್ಡಕಾಡುಮರಗಿಡ ಬಳ್ಳಿ
ಪಾಠಶಾಲೆಯು ನಮ್ಮಮನೆಯ ಮುಂಗಡೆಗೇ.

೪

ತಾಯಿತಂದೆಯರೋದು ಬರಹವರಿತವರಲ್ಲ
ತುಂಬಮನೆಮಂದಿಯಿರೆ ಪ್ರೀತಿಶಾಂತಿಯಲೀ,
ಮೂವತ್ತುವರ್ಷ ಯಜಮಾನರಾಗಿಯೆ ತಂದೆ
ಬಾಳಿದರು, ಆ ದಿನವ ನೆನೆವೆನಿಲ್ಲಿ.

೫

ಓದುಬರಹಗಳಿಂದ ಮಾನವತೆಯರಳುವುದೆ?
ಓದಿಲ್ಲದಿರಲು ನಿಸ್ತೇಜವಾಗುವುದೇ?
ಮನಸು-ಕರ್ಮಗಳು ಸತ್ಪಥದೆ ಸಾಗಲು ಬಾಳು
ಹಸನಾಗುವುದನರಿತೆನವರ ಜೀವನದೇ.

೬

ಮೂವತ್ತರಿಂಮಿಗಿಲು ಮಂದಿಯಿಹ ಮನೆಯಲ್ಲಿ
ತಂದೆಯಿದ್ದರೆ ಗಲಭೆಗೌಜಿಯಿಲ್ಲ,
ಶಿಕ್ಷೆಗೇನಲ್ಲ! ಹಿರಿಯರೊಳಿರುವ ಭಯಭಕ್ತಿ
ಕಾರಣವು; ಅದನೆಣಿಸಿ ಈಗ ಫಲವಿಲ್ಲ.

೭

ತಂದೆಯಾಡಳಿತೆಯಲಿ ಮದುವೆಯಾಗಿಹುದೊಂದು
ಅಳಿಯ ಸೊಸೆಯರಿಗೈದು ಮುಂದಿಗೊಮ್ಮೆ,
ಐದು ದಿಬ್ಬಣಕ್ಕೈದು ಸಾಹಸ್ರಜನರಿರಲು
ಎಂಥ ಗೌಜಿಯ ಮದುವೆ! ಅದೆಕೊನೆಯ ಹೆಮ್ಮೆ.

೮

ತಂದೆಯೊಂದಿಗೆ ನಾನು ಮದುವೆ ಚಪ್ಪರದಲ್ಲಿ
ತಿರುಗುತಿರೆ ನನಗಾಗ ಐದುವರ್ಷ;
ನಗುವ ಹುಡುಗಿಯಕಂಡು ಮದುವೆಯಾಗುವೆನೆಂದೆ
ಜನರೆಲ್ಲ ನಗುತಿರಲು, ನನಗೆ ಬಲುಹರ್ಷ.

೯

ಮದುವೆಯಲಿ ಹೊರಗಿಂದ ಬಂದ ಹೆಣ್ಣುಗಳೊಡನೆ
ಹೊಸಯುಗದ ಹೊಸಗಾಳಿ ಬಂದು ಮನೆಗೆ
ಮನದೊಳಗೆ ಭೇದಭಾವನೆ ಬೆಳೆಯುವುದನರಿತು
ಜನರೆಣಿಕೆಗೊಪ್ಪಿದರು ತಂದೆ ವಿಭಜನೆಗೆ.

೧೦

ಅಧಿಕಾರಸೂತ್ರವಹಿಸಿದ ತಂದೆ ಆ ದಿನದಿ
ದುಡುಕುತಿದ್ದರೆ ಮನೆಗೆ ಮಂದಿಗೆಲ್ಲ,
ಹಿರಿಯರಾಸ್ತಿಗೆ ನಷ್ಟಕಷ್ಟ ಬರಬಹುದಿತ್ತು
ಅದನೆಣಿಸುವವರ್ಯಾರು ಇಂದಿಗಿಲ್ಲ.

೧೧

ಓದುಬರಹವ ಕಲಿವಕಾಲದಲಿ ಒದಗಿರುವ
ಸಂಕಟವನೆಣಿಸಲೆದೆ ಕರಗುತಿಹುದು;
ಓದಿದವರೊಡನಾಡಿ ಬೆಳೆದು ಬಾಳದತೆರದಿ
ಗೈದ ದುರ್ವಿಧಿಗೆ ಮನಮರುಗುತಿಹುದು.

೧೨

ಹುಡುಗನಾಗಿದ್ದಾಗ ನಮ್ಮಜ್ಜಿ ಬಲು ಮುದುಕಿ
ಮಾವ ಬಲು ಮುಂಗೋಪಿ, ಸ್ವಾತಂತ್ರ್ಯ ಜೀವಿ
ಪ್ರೀತಿಯಲಿ, ಕೋಪದಲಿ ಬುದ್ಧಿಯನು ತಿದ್ದಿದರು
ಸಲಹಿದರು ಬಹಳ ದಿನ ಮಮತೆಯಿಂದೋವಿ.

೧೩

ನಾಲ್ಕು ಮಕ್ಕಳು ನಾವು ನಮ್ಮ ತಾಯಿಗೆ, ನನಗೆ
ಅಣ್ಣ ತಂಗಿಯು, ತಮ್ಮರೊಬ್ಬೊಬ್ಬರಿರಲು,
ಹೆತ್ತಾರು ಮಕ್ಕಳೊಡನಾಡಿ ಬೆಳೆದಿಹ ಬಾಲ್ಯ
ಬರುವುದೇನಿನ್ನೊಮ್ಮೆ ಬೇಕು ಬೇಕೆನಲು.

೧೪

ಹನ್ನೆರಡು ವರ್ಷಗಳ ವರೆಗೆ ನಾನರಿತಿಲ್ಲ
ರೋಗರುಜಿಗಳ ಬಾಧೆ, ಬಳಿಕ ಈ ವರೆಗು
ಆಧಿ-ವ್ಯಾಧಿಗಳೊಂದನೊಂದು ಬೆಂಬತ್ತಿ ಬರೆ
ಜೀವನವೆ ಹೋರಾಟ, ಒಳಗು ಹೊರಗು

೧೫

ನಮ್ಮ ತಂದೆಯ ಮನೆಯ ನಾಲ್ಕು ಕಡೆಯಲಿ ಬಹಳ
ಬ್ರಾಹ್ಮಣರ ಮನೆ, ಅವರ ಮಕ್ಕಳೊಡನೆ
ಆಟಪಾಟಗಳಲ್ಲಿ ಕೂಡಿ ಬೆಳೆದುದರಿಂದ
ಪೂಜ್ಯಭಾವನೆಯವರೊಳಿಹುದು ತಾನೆ.

೧೬

ಮನೆ ಜನರಿಗೆಲ್ಲರಿಗು ತಾಯಿಯಲಿ ಬಲು ಸಲಿಗೆ
ಸರಳ ಹೃದಯದ ತಾಯಿಯಂಥ ಹೆಣ್ಣಿಲ್ಲ;
ಅವರ ಸತ್ಯ, ಪ್ರೇಮವನು ತಿಳಿದ ಜನರಿಂದು
ಗುಣಕೆ ಮತ್ಸರವುಂಟೆ? ನೆನೆಯುತಿಹರೆಲ್ಲ.

೧೭

ಅಳಿಯಕಟ್ಟಿನ ನಮಗೆ ಪಾವನದೆ ಮನೆಬದುಕು;
ತನ್ನ ಜನರನು ತಂದೆ ಪ್ರೀತಿ ಶಾಂತಿಯಲಿ
ಸಲಹಿದರು; ಸತಿಸುತರೆ ಹಿರಿದೆಂಬ ಭಾವನೆಯು
ಇಂದಿನಂತಿರಲಿಲ್ಲ ಆ ಕಾಲದಲ್ಲಿ.

೧೮

ಬಡತನವೊ, ಸಂಪತ್ತೊ ಯಾವುದಾದರು ಇರಲಿ
ಮನೆತುಂಬ ಮಂದಿಯೊಂದಾಗಿ ಪ್ರೀತಿಯಲಿ
ಬಾಳಲದು ಮಾನವನ ಜೀವನವು ಎನಬಹುದು;
ಸತಿಪತಿಯರೇ ಬೇರೆ ಇರಲು ಸೊಗವೆಲ್ಲಿ?

೧೯

ತಂದೆ-ಮಾವಂದಿರಿಬ್ಬರು ಒಂದೆ ವರ್ಷದಲಿ
ಅಗಲಿದರು, ಹದಿನೆಂಟು ವರ್ಷ ನನಗೆ
ಮುದಿ ತಾಯಿ, ಎಳೆತಂಗಿ, ತಿಳಿವು ಬೆಳೆಯದ ಅಣ್ಣ,
ಕಿರಿತಮ್ಮ, ಸಂಸಾರ ನಿರ್ವಹಣ ಹೇಗೆ?

೨೦

ತಂದೆಯಗಲಿದ ಮೇಲೆ ಶಾಲೆ ಬಿಟ್ಟೆನು ನಾನು
ಶಾಲೆಯಲಿ ಕಲಿಸಿದೆನು ಮೂರು ವರುಷ
ಹಿಂದೆಂದು ಮುಂದೆಂದು ದೊರೆಯದಿಹ ಸತ್ಸಂಗ
ದೊರಕಿತಾ ವೇಳೆಯಲಿ ಸೌಜನ್ಯ, ಸರಸ.

೨೧

ನನ್ನ ಜಾತಿಯ ಧನಿಕರೆಂದು ಹೊಗಳಿದೆನಿಲ್ಲ,
ಜಾತಿಗಿಂತಲು ನೀತಿ ಹಿರಿದೆಂಬೆನು;
ಧನಕಿಂತ ಗುಣವಧಿಕವೆನ್ನುವೆನು ಎಂದೆಂದು;
ಹೃದಯವಾನಂದಿಸಿರೆ ಸಂಕೋಚವೇನು?

೨೨

ಆರು ತಿಂಗಳ ಸನ್ನಿವಾತದಲಿ ಧರೆಯ ಋಣ
ತೀರಿದರು, ತೀರದಿರಲುಳಿದೆ ಬದುಕಿ;
ತೆಂಕನಾಡಿನ ಹೊರಗೆ ಬರಹಗಾರಿಕೆಯಿಂದ
ಇರಲು ನನ್ನನು ನಾನೆ ಬೆದಕಿ ಬೆದಕಿ.

೨೩

ಕೋಳಿ ಜೂಜಿನ ಹುಚ್ಚು ತಂದೆಯಲಿ ಅತಿಶಯವು
ಹಟಮಾರಿತನವೊಂದು ಮಾವನಲಿ ಅಧಿಕ;
ದುರ್ಬಲರ ಸಹವಾಸ ಅಣ್ಣನಿಗೆ, ಇದರಿಂದ
ಪರಊರು, ಪರಸೇವೆ ನನಗೆ ಇದು ತನಕ.

೨೪

ಒಂದು ಕಡೆ ಒಂದೇ ಸ್ವತಂತ್ರ ಉದ್ಯೋಗದಲಿ
ಬಾಳುವುದೆ ಮೇಲು, ಊರೂರುಗಳ ತಿರುಗಿ
ಹಲವು ಜನರೊಳು ಸೇರಿ ಬದುಕು ಸಾಗಲು ನಮಗೆ
ಚೈತನ್ಯವೇರುವುದು ದೌರ್ಬಲ್ಯವಡಗಿ.

೨೫

ಓದುಮುಗಿದಂದಿನಿಂದೀವರೆಗು ಕಾವ್ಯಗಳ
ಓದುವುದು ಬರೆಯುವುದು ಅದೆ ಒಂದು ಹುಚ್ಚು!
ತಪ್ಪೊಪ್ಪುಗಳನೋದಿ ಸರಿಪಡಿಸುವವರಿಲ್ಲ
ಹೃದಯಪರಿಪಾಕವೇ ಗುರುವೆಂದು ನೆಚ್ಚು!

೨೬

ಸಾಹಿತ್ಯದಭಿರುಚಿಯು ಬೀಜವೆನ್ನಲಿ ಬಿತ್ತಿ
ಬೆಳೆಯಿಸಿದ ಗುರುವೊಬ್ಬರಿರುವರಿಂದು
ಕಾವ್ಯ ಭಂಡಾರವನ್ನವರ ಬಳಿ ನೋಡಿದೆನು
ನೀಡಿದರು ತೆಗೆತೆಗೆದು ಓದು ನೀನೆಂದು.

೨೭

ಹಳೆಗನ್ನಡದ ಗ್ರಂಥಗಳ ಸವಿಯನುಣಿಸಿದರು
ಸಕ್ಕದದ ಸವಿಯನೊಂದಿನಿತು ಬಳಿಕ
ಹೊಸ ಹಳೆಯ ಕಾವ್ಯಗಳ ತನಿರಸವನುಣಿಸಿದರು
ಮರೆಯೆನೆಂದಿಗು ಜೀವ-ಭಾವವಿರುವನಕ.

೨೮

ಸಂಸಾರಜೀವನವನಾರಂಭಿಸಿದ ಮೇಲೆ
ಶ್ರೀಕ್ಷೇತ್ರಧರ್ಮಸ್ಥಳ ಸೇರಿ ಮನದ
ಹಲವುಹಂಬಲಗಳಾಂತು ಭಕ್ತಿ-ಜ್ಞಾನಗಳು
ಬಲಿತವದರಿಂದಾಯ್ತು ಜೀವನದಿ ಬಿನದ.

೨೯

ಕ್ಷೇತ್ರದೊಡೆಯರು ಪೂಜ್ಯ ಹೆಗ್ಗಡೆಯರಲಿ, ನನಗೆ
ಅವರ ಸಹೃದಯ, ಶಾಂತಿ, ಸೌಜನ್ಯ, ಸತ್ಯ
ಸತ್ಕರ್ಮ, ಪ್ರೇಮ, ಶ್ರದ್ಧಾ, ಭಕ್ತಿ, ಜ್ಞಾನಗಳ-
ಎಣಿಸಿ ತಲೆಬಾಗಿದೆನು ಸದ್ಗುಣಕೆ ಭೃತ್ಯ.

೩೦

ಭಕ್ತಿಯಲಿ ಹುಟ್ಟಿ ಭಕ್ತಿಯಲಿ ಬೆಳೆವುದು ಕ್ಷೇತ್ರ;
ಕ್ಷೇತ್ರದಿಂದಲಿ ಭಕ್ತಿ ಹುಟ್ಟಿ ಬೆಳೆಯುವುದು;
ಬೀಜವೃಕ್ಷನ್ಯಾಯದಂತೆ ಜೀವನದಲ್ಲಿ
ಚಿರಶಾಂತಿಯನೆ ತಂದು ತುಂಬುತಿಹುದು.

೩೧

ಅವರ ಸಹವಾಸದಲಿ ನನ್ನೆದೆಯ ದುರ್ಬಲತೆ
ತೊಲಗಿ ನವಚೇತನವು ಜನಿಸಿ ವಿವಿಧ
ಮತಧರ್ಮಗಳ ಕಲೆಯ, ಸಾಹಿತ್ಯಗಳ ಸವಿಯ
ಸವಿದೆನೆಂದೆಂದಿಗೂ ದೊರೆಯದಿಹ ಮೋದ.

೩೨

ಸಾಹಿತ್ಯ, ಧರ್ಮಕಲೆ, ಒಂದಾಗಿ ಬೆರೆತಿರಲಿ,
ಅಲ್ಲದಿರಲೊಂದೊಂದೆ ಆಗಿ ಇರಲಿ,
ಜೀವನದ ಸವಿಸೊಗಸು ನೋವುನಲಿವುಗಳನ್ನು
ಕಾಣಬಹುದದರ ಒಳಗಣ್ಣುಗಳಲೀ;

೩೩

ನಾಡು, ನುಡಿ, ಜಾತಿ, ಮತ, ಧರ್ಮ ಭೇದಗಳೇಕೆ?
ಭರತಾತ್ಮಜರು ಮಾನವರು ಒಂದೆ ಜಾತಿ;
ಭರತ ಮಾತೆಯ ಮಗಳು ನಮ್ಮ ಕನ್ನಡ ತಾಯಿ
ಅವಳ ಸೋದರಿ ತುಳುವನಾಡಿನೊಡತಿ;

೩೪

ಸಾಗರನು ತೆರೆಗೈಗಳಲಿ ಪಾದವನು ತೊಳೆದು
ಮುಗಿಲ ಮುಗಿಲಿನ ಮಾಲೆ ಮುಡಿಸುತಿಹನು;
ಮಂಗಳೂರಲಿ ನಿನಗೆ ಮಂಗಳವನೆಣಿಸುವರೆ?
ಮೌನವೇತಕೆ ದೇವಿ? ಮರುಕವಿಹುದೇನು?

೩೫

ಪಶ್ಚಿಮಾದ್ರಿಯ ದಿಂಬಿಗೊರಗಿ ಸೌಮಂಗಲೆಯು
ಹಸುರು ಬಯಲಿನ ಸೀರೆಯಿಂದ ಶೋಭಿಸಲು,
ನೇತ್ರದಿಂದುದಿಸಿದಳೆ ನೇತ್ರಾವತಿಯದೇನು?
ಸ್ವಾತಂತ್ರ್ಯದಾನಂದ ಭಾಷ್ಪವೇ ಹೇಳು?

೩೬

ನಮ್ಮ ತುಳುನಾಡದೇವಿಯ ಸೊಬಗು ಸೌಂದರ್ಯ
ಸಂಚರಿಸಿ ಸವಿಯಲೆದೆದುಂಬಬಹುದು;
ಕೈಗನ್ನಡಿಯಲಿ ದಿಗ್ಗಜವ ಕಾಣುವ ತೆರದಿ
ಭರತಮಾತೆಯ ಮುಖವ ನೋಡಬಹುದು.

೩೭

ಕಡಲು, ನದಿ, ಬೆಟ್ಟ, ಬಯಲುಗಳಿಹವು, ನಗರಗಳು,
ತೀರ್ಥಕ್ಷೇತ್ರಗಳಿಹವು ಶಿಲ್ಪಕಲೆಗಳಲೀ
ಮೆರೆವನಾಡಿದು; ಕವಿಗೆ, ಕಲಿಗೆ, ಸತ್ಪುರುಷ,
ದೇಶಭಕ್ತರ ಜನ್ಮಭೂಮಿಯಿಲ್ಲೀ.

೩೮

ತುಳುನಾಡಿನಲಿ ಬಂಟರಿಹರು ಬಲುಕಾಲದಲಿ
ಮಾತು, ಕೃತಿ, ಭಾವಗಳು ವೀರರಸದಿ
ಮೆರೆವವೆನೆ ಕರುಬದಿರಿ; ನಾಡಿನೇಳಿಗೆಗವರ
ಹುರುಪುಹುಮ್ಮಸದ ಕರ್ತವ್ಯ ಮೂಲ ನಿಧಿ.

೩೯

ವಿದ್ಯೆಯಲಿ ಮುಂದರಿದು, ಶಾಂತಜೀವನದಿಂದ
ಜ್ಞಾನದಾನವ ನೀಡಿ ನಾಡಿನೇಳಿಗೆಯು
ಗೈವ ಬ್ರಾಹ್ಮಣರ ಆದರ್ಶದಂತೆಯೆ ಎಲ್ಲ
ಜಾತಿಗಾದರ್ಶವಿಹುದರಸು ಸದುಹೃದಯ.

೪೦

ಎಲ್ಲ ಜಾತಿಗಳೊಡನೆ ಕೂಡಿ ನಡೆಯುವ ವಿನಯ
ಹಿರಿಯರಲಿ ಭಕ್ತಿ, ಸಜ್ಜನರಲ್ಲಿ ಪ್ರೀತಿ,
ದುರ್ಮದರ ತಲೆಬಾಗಿಸುವ ಶೌರ್ಯದಾಟೋಪ
ಬಂಟರಾದರ್ಶವಿದು ಕಾಣಬಹುದರಸಿ.

೪೧

ಕಳೆದ ಹದಿನಾರು ವರ್ಷವನೆಣಿಸಲೊಮ್ಮೊಮ್ಮೆ
ಬೆರಗು, ಬೇಸರ, ಧೈರ್ಯವಾನಂದವಹುದು;
ಹೊಸಬರಾದವರೊಂದು ಸಣ್ಣದೋಣಿಯನೇರಿ
ತುಂಬಿ ಹರಿಯುವ ಹಳ್ಳದಾಟಿದಂತಹುದು.

೪೨

ಸತ್ಯಪ್ರೇಮಗಳೆಂದು ಹುಚ್ಚು ಹೊಳೆಯನು ದಾಟಿ
ಹಲವು ಸಲ ಸಂಕಟವಪಟ್ಟಿರುವೆನು;
ನುಡಿದಂತೆ ನಡೆವ ಜನರಿಲ್ಲದಿಹ ಜೀವನದಿ
ಒಡನಾಟ ಕಡುಕಷ್ಟವೆಂದರಿತೆನು.

೪೩

ದುರ್ನಡತೆ, ದುರ್ಗುಣಗಳನು ನಿರ್ಭಯದಿ ನುಡಿದು
ಇದಿರಿಸಲು ಹಿಂಜರಿಯಲಿಲ್ಲೆಂದಿಗೂ;
ಹಿರಿಯರೋ, ಧನಿಕರೋ, ಪಂಡಿತರೊ, ಯಾರಿರಲಿ
ಅದರಂತೆ ಸಾಗಿದರೆ ಸಾಕೆಂದಿಗೂ.

೪೪

ಜೀವನದೊಳೊಂದು ದಿನವಾದರೂ ನಾದುಡಿದು
ನಾನೇ ಸ್ವತಂತ್ರ ಬದುಕುವ ಕಾಲವಿಹುದೇ?
ಇರಬಹುದು; ವೇಗದಲಿ ಮುಂಬರಿವ ಜನತೆಯನು
ಧನ-ದರ್ಪ-ಶಕ್ತಿಗಳು ತಡೆಯಬಹುದೇ?

೪೫

ಹದಿನಾರು ವರುಷದಲಿ ಬರೆದ ಕವಿತೆಗಳನ್ನು
ತಪ್ಪೊ, ಒಪ್ಪೋ ಮಾಲೆಗೈದಿರುವೆನು;
ಜನಮನವನೊಲಿಸಿ ಮಮತೆಯ ಪಡೆವ ಕಾವ್ಯವನು
ಬರೆಯದಿರಲೆನ್ನಾಸೆ ಮುಗಿವುದೇನು?

೪೬

ಮೂರು ವರುಷದ ಹಿಂದೆ ನನ್ನನಗಲಿದ ತಾಯ
ನೆನಪು ಕರುಳನೆ ಕೊರೆಯುತಿಹುದು ದಿನವೂ;
ನನ್ನ ಸುಖದುಃಖದಲಿ ಭಾಗಿಯಾಗಿಹ ಜನರ
ಅಗಲಿಕೆಯು ಮರುಕವಿಹುದೆನಗೆ ಕ್ಷಣಕ್ಷಣವೂ.

೪೭

ಕಳೆದ ಮೂವತ್ತಾರು ವರುಷದಲಿ ನಾನೇನು
ಗಳಿಸಿದೆನು? ಗಳಿಸಲಿನ್ನಾವುದಳವು?
ವಿಶ್ವಸೋದರ ಪ್ರೀತಿ, ಸತ್ಯ, ಶಾಂತಿಗಳಿಂದ
ಬಾಳು ಬೆಳಗಲು ಅದುವೆ ಎನ್ನ ಬಗೆಯೊಲವು!

೪೮

ಜೀವನದಿ ಬಹು ಜನರ ಪ್ರೀತಿ ಋಣ ಪಡೆದಿಹೆನು,
ಸಹವಾಸದಲಿ ಮನಸು ಬೆಳಗಿರುವುದು,
ಋಣವೆಲ್ಲ ಪರಿಹರಿಸದೆಯೆ ಬಾಳು ಮುಗಿಯುವುದೆ?
ಹಾಗಾಗದಿರಲೆಂದು ಹೃದಯಬಯಸುವುದು.

---

## ೩೧. ಹೆಣ್ಣು

೧

ವಿಧಿಯ ಮಧುರ ಸೃಷ್ಟಿ ನೀನು
ವಿಮಲ ರೂಪ ಧಾರಿಣಿ;
ಕವಿಯ ಮನಸಿನಂತೆ ಕನಸು
ಕಾಣುತಿಹ ವಿಹಾರಿಣೀ.

೨

ಮಾಯ ಹರಿಣದಂತೆ ನೀನು
ಮನವ ಸೆಳೆವ ಮೋಹಿನಿ;
ಕುಣಿವ ನವಿಲಿನಂತೆ ಕಣ್ಣ
ಸೆಳೆವ ರೂಪದಾಯಿನಿ.

೩

ಮರವು ಗಂಡು, ಲತೆಯು ಹೆಣ್ಣು
ನರನ ಬಾಳು ಸುರವನ;
ಒಲವು ಗೆಲವು ನಲವಿನಿಂದ
ತಳಿರು ಸುಮದ ನಂದನ.

೪

ಕೆರಳಿದಾಗ ಫಣಿಯ ತೆರದಿ
ಮುನಿಸು ವೈರವೇತಕೇ?
ಮುನಿದ ವಿಷದಿ ಬದುಕು ಕೆಡಲು
ಸರ್ವನಾಶ! ಬಾಲಿಕೇ!

೫

ಮಮತೆಯಿಂದ ತಾಯಿಯೆನಿಸು
ಭಾವಜೀವ ಜಾಲಕೇ;
ಪ್ರೇಮದಿಂದ ರಮಣಿಯೆನಿಸು
ಪತಿಯ ಹೃದಯ ನಿಲಯಕೇ.

೬

ನಿನ್ನ ಸೊಬಗು, ಪ್ರೇಮ, ಸಹನೆ,
ಬುವಿಗೆ ಕಲ್ಪ ವೃಕ್ಷವೂ;
ಗಂಡುತನದ ಲಾಲಸೆಯಲಿ
ಹೆಣ್ಣುತನ ಪರೋಕ್ಷವೂ.

೭

ಶಿಶುವು ಚಿಗುರು, ಹರಯ ಮುಗುಳು
ಕನ್ನೆತನವು ಪುಷ್ಪವೂ;
ನಲ್ಲ ವೃಕ್ಷದೊಡನೆ ಮಕ್ಕ
ಳೆಂಬ ಹಣ್ಣು ಕಾಯಿಯೂ.

೮

ನಖಶಿಖಾಂತ ನಗ್ನವಾಗಿ
ಸುಲಿಗೆಗೈವ ಕವಿಗಳಾ;
ಶಪಿಸು ಹೆಣ್ಣೆ! ಜೀವನದಲಿ
ಬೆರಸು ವಿವಿಧ ಸವಿಗಳಾ.

೯

ಪ್ರಣಯದಗ್ನಿ, ಸ್ವಾರ್ಥದಗ್ನಿ,
ಸುಡದು ಹೆಣ್ಣುತನವನೂ;
ನೆಚ್ಚು-ಮೆಚ್ಚು ಕದಲದಿರಲು
ನಿನಗೆ ಎಣೆಯು ಕಾಣೆನೂ.

೧೦

ಭ್ರಮರ ಪ್ರೇಮ, ಕಾಮ, ಭೋಗ-
ವೆಂಬ ಇಂದ್ರಜಾಲಕೇ
ಸಿಲುಕಿ, ಬುವಿಯ ಮಧುರ ಫಲವ
ಕೆಡಿಸದಿರು ವಿನೋದಕೇ.

---

## ೩೨. ಸೋದರಿಗೆ



೧

ಸೋದರಿ, ಮೋದದಿ ಬಾ! ಬಳಿಗಿಂದು,
ಭೇದವಿಹೀನದ ತೀರ್ಥದಿ ಮಿಂದು,
ಸಾದರದಲಿ ಮಾನವ ಸಂಕುಲವ
ಸೋದರರೆನೆ ಪ್ರೀತಿಸು, ಪಡೆ ನಲವ;

೨

ಮತಧರ್ಮದ ವಿಧಿನಿಯಮದ ಬಂಧ,
ಹತವಾಗಲಿ, ಪ್ರೇಮದ ಬಲುಹಿಂದ
ಶತಶತಮಾನದ ಧರ್ಮದ ಸಾರ,
ಕೃತಕೃತ್ಯತೆಯಂ ಪೊಂದಲು ಸುಕರ;

೩

ಪರತಂತ್ರದ ಕಾರ್ಗತ್ತಲ ಸೆರೆಯು
ಹರಿಯಲು, ಭಾರತ ವೀರ ಜನನಿಯು,
ಕರದಿಂದಪ್ಪುತೆ ಸುತರೆಲ್ಲರನು,
ಮರೆತಳೆ ದುಃಖವ? ನಗುತಿಹಳೇನು!

೪

ಮಾತೆಯು ವಸನವು ಮಾಸಿದೆ; ತುರುಬು
ಜೋತಾಡುತಲಿದೆ, ತಿಲಕವು ಸರಿದು,
ಬಡವಾಗಿದೆ ತನು, ಕೊರಗಿದೆ ಮನಸು;
ನುಡಿಯಿಸು ಸೋದರಿ! ಮನವ ತಣಿಯಿಸು;

೫

ಪೆತ್ತಬ್ಬೆಯ ನೀನೆರಡುಂ ಕರದಿಂ
ಎತ್ತಿ ಪಿಡಿದು, ಗಂಗೆಯ ತಿಳಿಜಲದಿ
ಮಿಾಯಿಸಿ, ಪೀತಾಂಬರವನ್ನುಡಿಸು;
ಕಾಯಕ್ಕೊಪ್ಪುವ ಕುಪ್ಪಸ ತೊಡಿಸು.

೬

ತುರುಬನು ಹೆಣೆಯುತ, ಸುಮಗಳನಿಟ್ಟು,
ಪೆರೆನೊಸಲಿಗೆ ವರ ತಿಲಕವನಿಟ್ಟು,
ನಿರುಪಮ ರತ್ನಾಭರಣಗಳಿಂದ,
ಭರತಾಂಬೆಯ ಸಿಂಗರಿಸತಿ ಚಂದ;

೭

ಮೃಷ್ಟಾನ್ನದ ಭೋಜನದಿಂದುಣಿಸು;
ಕಷ್ಟಗಳೆಲ್ಲವ ಪ್ರೇಮದಿ ತಣಿಸು;
ಜನನಿಯ ಪುನರುಜ್ಜೀವನವೆಂಬ
ಘನಕವರ್ಾಬ್ಧಿಗೆ, ನೀ ವಿಧು ಬಿಂಬ

೮

ಭರತಾತ್ಮಜರೆದೆ ಕಾವಳವೆಲ್ಲಾ
ಹರಿಯಲಿ ಸೋದರಿ ಸೋದರರೆಲ್ಲಾ,
ಹಿರಿದುತ್ಸಾಹದೊಳೈಕ್ಯತೆಯಿಂದಾ,
ನೆರೆಸೇವಿಸಲಪ್ಪಗೆ ಆನಂದಾ;

೯

ಸುತರೆಲ್ಲರ ಹೃದಯಗಳೈಕ್ಯತೆಯಂ
ಅತಿಬೇಗನೆ ಪಡೆಯುತೆ, ಚಿರಮುದವಂ
ಜನನಿಯು ಪೊಂದುವ ತೆರಗೈಯುವುದೇ
ಜನುಮದ ಧ್ಯೇಯವು ಆದರ್ಶವದೇ.

೧೦

ಸುಮಪಲ್ಲವ ಸುಪ್ಪತ್ತಿಗೆಯಲ್ಲಿ
ಕ್ರಮದಿಂ ಜನನಿಯ ಕುಳ್ಳಿರಿಸುತಲಿ
ಸುಮನೋಹರ ಮಂಗಳಗೀತೆಯಲಿ,
ನಮಿಸುವ "ಜಯಹಿಂದೂ" ನಿನದದಲೀ.

---

## ೩೩. ಬಡವಾಗದಿರು ಮನವೆ

ಬಡವಾಗದಿರು ಮನವೆ ಬಹಳ ಬಯಸಿ
ಅಡಿಗಡಿಗೆ ನೂರಾರು ಬಯಕೆಗಳು ಬಾಯ್ಬಿಡಲು ॥

೧

ಜೀವವೆಂಬುದೆ ರಾಮ, ಮನಸು ಮುಖ್ಯ ಪ್ರಾಣ
ಬಯಕೆ ಎಂಬುದೆ ಸೀತೆ, ಸ್ವಾರ್ಥ ರಾವಣನು;
ರಾಮ ದೂತನ ಭಕ್ತಿ ನಿನಗಿರಲು ಜೀವನವೆ
ರಾಮಾಯಣವು ಇದಕೆ ಸಂದೇಹವೇನು?

೨

ಶ್ರೀಹರಿಯು ಜೀವಾತ್ಮ, ಮನಸು ಪಾರ್ಥನು ಎನಲು
ಆಸೆಯೇ ಗಜನಗರ, ತೃಷ್ಣೆ ಕೌರವನು
ಫಲುಗುಣನ ಧೀರತನ ಕರ್ಮ ಕುಶಲತೆಯಿರಲು
ಜೀವನವೆ ಭಾರತವು ಬೇರಿಲ್ಲವಿನ್ನು.

೩

ಹಿಂದುಮುಂದಿನ ಆಗುಹೋಗುಗಳ ಕನವರಿಸಿ
ಕಂಸನಂದದಿ ಚೀರುತಿರುವುದೇಕೆ?
ವಿಭುವಿನಪ್ಪಣೆಯಿಲ್ಲದೇನಿಲ್ಲಿ ನಡೆಯುವುದೆ?
ಶಾಂತಿಯಲಿ ಕೃತಕರ್ಮನಾಗು ಭಯವೇಕೆ?

---

## ೩೪. ನುಗ್ಗು ನಡೆ ಮುಂದೆ

ತಗ್ಗದಿರು, ಮುಗ್ಗದಿರು, ನುಗ್ಗಿ ನಡೆ ಮುಂದೆ!
ಬಗ್ಗಿ ಬದುಕಲು ಬೇಡ, ಹಿಗ್ಗಿ ನಡೆ ಮುಂದೆ!

೧

ಜಾತಿಮತ ಪ್ರಾಂತಗಳ ಗೋಮುಖ ವ್ಯಾಘ್ರಗಳ
ಅಧಿಕಾರ-ಧನಮದದ ಭೂತಭೇತಾಳಗಳ
ಬೇರಿಗರ ಮೋಹಿನೀ ಸಂಘಸಂದೋಹಗಳ
ಕೆಚ್ಚೆದೆಯ ಕಲಿತನದಿ ಹುಟ್ಟಳಿಸು ನಡೆಮುಂದೆ

೨

ಸತ್ಯಭಕ್ತಿಗಳೆಲ್ಲ ಹೇಡಿತನವೆನ್ನುವರು,
ತ್ಯಾಗಿ-ಯೋಗಿಗಳನ್ನು ಹುಚ್ಚರೆಂದೆನ್ನುವರು,
ದೀನಹೀನರನೆಲ್ಲ ಪಾಪಿಗಳು ಎನ್ನುವರು
ಸಾಕು ಸ್ವೈರಣೆ! ಹಿಗ್ಗಿ ನುಗ್ಗು ನಡೆ ಮುಂದೆ.

೩

ಕಟ್ಟುವರು ಸೇತುವನು ಬಡಜನರ ಸಾಗರಕೆ,
ಮೆಟ್ಟಿದಾಟಲು, ಸಿರಿಯಮದದಿಂದಲಾದಡಕೆ
ಭೋರ್ಗುಡಿಸುತಪ್ಪಳಿಸೆ ತೆರೆಗೈಗಳೊಂದಾಗಿ
ಸೇತುವಳಿಯದೆ? ಹಿಗ್ಗಿ ನುಗ್ಗಿ ನಡೆ ಮುಂದೆ.

೪

ಧರ್ಮಶಾಸ್ತ್ರಗಳೆಲ್ಲ ಹೊಲಸು ಹೊರೆಯೆನ್ನುವರು,
ಧನವೆ-ದೇವರು ಸ್ವರ್ಗ ಮುಕ್ತಿಯೆಂದೆನ್ನುವರು,
ಮಾತು ಸುಧೆಯಂತೆ, ಕೃತಿ ವಿಷದಂತೆ ತೋರುವರು,
ಧೃತಿಗೆಡದೆ, ಪಥಬಿಡದೆ, ನುಗ್ಗು ನಡೆಮುಂದೆ.

## ೩೫. ನಿಧಿ

೧

ಅನುಭವಕೆ ಸರಿಯಾದ ಬೋಧೆ ಬೇರೊಂದಿಲ್ಲ
ಪ್ರಕೃತಿ ಜಗದೀಶ್ವರಿಯು ತೆರದ ಗುರುವಿಲ್ಲ,
ಅವಳ ಮೆಚ್ಚಿಸಿ ನಡೆವ ಸಾಧಕಗೆ ಸಮನಿಲ್ಲ
ಪ್ರೇಮ ವಿಜಯಕೆ ಮಿಗಿಲು ಪುರುಷಾರ್ಥವಿಲ್ಲ.

೨

ನಿಷ್ಕಾಮ ಪಥದಿ ಮನ-ಭಾವ-ಕರ್ಮವ ನಡೆಸಿ
ಬೆದಕಿ ತನ್ನಾತ್ಮವನು ತಿಳಿದು ದೃಢಗೊಳಿಸಿ
ಪರರ ವಚನವನಾಲಿಸದೆ ಹೃದಯ ಶುದ್ಧಿಯಲಿ
ಮುಕ್ತನಾಗುವುದೆ ನರಜನುಮದ ರಹಸ್ಯ.

೩

ತಾನು ಕಂಡುದನೆಲ್ಲ ಬೆದಬೆದಕಿ ತಿಳಿವ ಸವಿ,
ಸವಿಯರಿತು ಮರಳುವುದೆ ಮಾನವಗೆ ಹಿರಿದು,
ತುಸು ಬೆರಗ ತೋರಿಸುತ್ತೆನಿತೊ ದೂರಕ್ಕೊಯಿದು
ಮರುಳುಗೊಳಿಸುವುದೆ ಸೃಷ್ಟಿಯ ಹಿರಿಯ ಬಿರಿದು.

೪

ಶೋಧನೆಗಳೆಲ್ಲ ಸ್ವಚ್ಛಂದದನುಭವದಲ್ಲಿ
ವಂಚಿಸುವ ವಕ್ರತೆಗಳಲ್ಲಿ ಬೇಡ.
ಧಾತುರತ್ನಗಳ ಧರೆಯಿಂದಗೆದು ತೆಗೆವಂತೆ
ವಲ್ಮೀಕವನು ಕೆಣಕಿ ನೋಯ ಬೇಡ.

೫

ಭೂಮಿಯೆಂಬಾ ಮನೆಗೆ ಸೂರ್ಯಚಂದ್ರರೆ ದೀಪ
ಜೀವ ಸಂದೋಹವೆ ಕುಟುಂಬವಾಗಿ
ಸೃಜಿಸಿರಲು ಪರಮಾತ್ಮ, ಭೇದವೇಕೆಮ್ಮೊಳಗೆ
ಹೃದಯೇಶನಿರಲು ನಿರ್ಭೇದನಾಗಿ

೬

ಹವಳಲತೆಯಂತೆ ಮುತ್ತಿನ ಚಿಪ್ಪಿನಂತೆ ಕಂ-
ಗೊಳಿಸಿ ಬೆರಗಾಗಿಸುವುದೆನಿತೊ ನೋಟ
ಒಡೆದುನೋಡಿದರೆ ಒಳಗೇನಿಲ್ಲ ಬರಿಧೂಳು
ಇದಕೆ ಸೋಲದಿರಿದುವೆ ಮಾಯೆಯಾಟ

೭

ಹೃತ್ಪೂರ್ವಕದ ಬಯಕೆ ಫಲಿಸುವುದು ನಿಜವಾಗಿ
ಬಯಸುವುದು ಮನಸಿನಾ ಜನ್ಮಗುಣವೂ
ದೇಶ ಭಾಷಾಸಮಾಜದ ಸೇವೆಗಳ ಗೈದು
ಆತ್ಮದರ್ಶನ ಪಡೆವುದೇ ಹಿರಿಯತನವೂ

೮

ಕಾಲಪ್ರಕೃತಿಗಳೆಲ್ಲ ಪರಿವರ್ತನಾತ್ಮಕವು
ಚಕ್ರದಂತುರುಳುತಿವೆ ಬಲುವೇಗದಿ
ಆಯುವೆಂಬುವ ದಾರ, ಹಗಲಿರುಳಕೋಲಿನಲಿ
ಅಳೆದು ಮುಗಿಯುವುದು ಮುಂದರಿ ತ್ವರಿತದಿ

೯

ಮಾಯಾ ಮುಸುಕವಿಟ್ಟು, ಜೀವಕೋಟಿಗಳಿಹವು
ಮಾಯೆಯಾವರಿಸಿರುವ ಪರಿಮಾಣದೊಳ್
ಹೆಚ್ಚು ಕಮ್ಮಿಗಳಿಂದ ಮೇಲು ಕೀಳುಗಳಾಯ್ತು
ಅದನು ಕಳಚಿದರೆ ನಾವೆಲ್ಲ ಒಂದೇ.

೧೦

ಇಂದಲ್ಲ ನಾಳೆಯಾದರು ಎಲ್ಲವರು ನಾವು
ಒಂದೆಕಡೆ ಒಂದಾಗಿ ಸೇರುವವರು;
ಆ ದಿವ್ಯ ಕ್ಷೇತ್ರ ಯಾತ್ರಾರ್ಥಿಗಳು ನಾವೆಲ್ಲ
ದಾರಿ-ದೂರಗಳಲ್ಲಿ ಭೇದವೀಗ.

೧೧

ಓದುಬರಹಕೆ ಮುಗಿಯುದಿಲ್ಲಿಯು ವಿಚಾರಗಳು
ಅನುಭವದನಿರ್ವಚನವಲ್ಲಿ ಮಾತ್ರ.
ಶೌರ್ಯಧೈರ್ಯಪರಾಕ್ರಮಗಳ ಬಲುಹಲ್ಲಿಲ್ಲ
ನಿರ್ಮಲ ಪ್ರೇಮಮತ್ತತೆಯು ಮಾತ್ರ.

೧೨

ಆಸಕ್ತಿ-ಸಂಗಗಳ ನೂಲಿನಲಿ ಹೆಣೆದಿರುವ
ತೆರೆಯನೆತ್ತುವುದನಿತು ಸುಲಭವಲ್ಲ
ತ್ರಿಕರಣದಿ ಬೇರ್ಬಿಟ್ಟ ತ್ರಿಭುವನದೆ ಬಯಕೆಗಳ
ಕಿತ್ತೊಗೆಯೆ ತೆರೆಸರಿದು ಬೆಳಗುತಿಹನಾತ್ಮಂ

೧೩

ಹೊರಗೆ ತರತರವಾದ ಗಾನ ಕೇಳಿಸುತಿಹುದು
ಒಳಗೆ ಮುರಲಿಯ ತರಲ ಸುಸ್ವರವದೊಂದೇ.
ಒಂದೆ ದನಿ ಹಲವು ನುಣ್ದನಿಯು ಪಸರಿಸುತಿಹುದು
ಅಲ್ಲಿ ಕಾಣದ ಕೈಯ್ಯ ಕುಶಲತೆಯುದೊಂದೇ.

೧೪

ಬಣ್ಣಬಣ್ಣದ ಕನ್ನಡಿಗಳು ಲೋಕದ ಕಣ್ಣ-
ಮುಂದಿಹವು ವಿವಿಧ ಮತಗಳಿಗೆ ಬೇರಾಗಿ
ವೈವಿಧ್ಯಗಳ ಗರ್ಭದೊಳಗಿನನೇಕಾಕ್ಷಿ ತೆರೆ-
ದಾಗ ನಿರ್ವಚನ ಸಂಶಯವು ನೀಗಿ.

೧೬

ಕವಿ, ಶಿಲ್ಪಿ, ಋಷಿ, ಗಮಕಿಯುರು ಹೃದಯ ಪರಿಪಾಕ-
ದಲಿ ಪ್ರಕೃತಿಯೊತ್ತಿರುವ ಮುದ್ರೆಯನ್ನು
ಜನಮನದೊಳೊಡಮೂಡಿಸುವರು; ನೀನವರಂತೆ
ಸಂಯಮದಿ ಶ್ರಮಿಸು ಪಡೆ; ಭ್ರಮಿಸ ಬೇಡೇನು,

೧೭

ಕ್ರಾಂತಿ-ಶಾಂತಿಗಳೆಂದು ದುಗುಡ ಸಂತಸವೇಕೆ?
ಶಾಂತಿ ಮುಗಿಲಿನೊಳಿಹುದು ಕ್ರಾಂತಿ ಸಿಡಿಲು.
ಮಳೆ ಸುರಿವ ಮುಗಿಲಿರಲಿ, ಸಿಡಿಲು ಬೇಡೆನುವಂತೆ
ಕ್ರಾಂತಿಯಿಲ್ಲದ ಶಾಂತಿಯಿಲ್ಲ ಪರಿಕಿಸಲು.

೧೮

ಹೆಣ್ಣು-ಹೊನ್ನುಗಳಿಂದ ಸಂಸಾರಿ ಎನಿಸಿದರೆ
ಸನ್ಯಾಸಿಯಾಗುತಿಹೆ ಭಕ್ತಿ-ಜ್ಞಾನದಲೀ.
ಸನ್ಯಾಸಿ-ಸಂಸಾರಿ ಎಂಬೆರಡು ಕಣ್ಣುಗಳು
ಇರುವವದೊ ರಾಜಯೋಗಿಯ ಮುಖದಲೀ.

೧೯

ಜ್ಞಾನ, ಭಕ್ತಿಯಹಿಂಸೆ, ಸತ್ಯ ಧರ್ಮಗಳೆಲ್ಲ
ಸ್ವರ್ಗ ಮುಕ್ತಿಗಳನ್ನು ಕೊಡಲಿ ಕೊಡದಿರಲಿ,
ಜೀವನದ ಯಾತ್ರೆಗದೆ ಸುಪಥವೆಂದರು ನಮಗೆ
ಬಲ್ಲವರು; ವಿವಿಧ ಜನರೊಡನಾಟದಲ್ಲಿ,

೨೦

ಮತಧರ್ಮದೇವರಲಿ ಭೇದವಾದಗಳೆಲ್ಲ
ನಮ್ಮ ಕಿರಿತನದ, ಕುಂದುಗಳ ಕುರುಹು,
ಒಬ್ಬೊಬ್ಬರೊಂದೊಂದು ಮತಧರ್ಮ ದೇವರನು
ಮಾಡಿ ಹೊಡೆದಾಡಿಸುವರದನು ಸುಟ್ಟುರುಹು.

೨೧

ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರೆಂಬುದು ನಾಲ್ಕು
ವರ್ಣಗಳು ಋಷಿ ವೈದಿಕರ ಕಾಲದಲ್ಲಿ
ಪತಿತ-ಪಾವನ-ಧನಿಕ-ಬಡವರೆಂಬುದು ನಾಲ್ಕು
ವರ್ಣಗಳು ನಮ್ಮ ಈ ಕಾಲದಲ್ಲಿ.

೨೨

ಸಂಸಾರದಲಿ ಹೆಣ್ಣು ಪ್ರೇಮ ವೃಕ್ಷದ ಬಿತ್ತು;
ಕಾಮುಕರ ತುತ್ತಾಗಿ ಬದುಕ ಬೇಕೇ?
ಉನ್ನತಿಯ ಪಥದಿ ಮುಂದರಿವ ಮಾನವನ ಹಿರಿ-
ತನದ ಕುರುಹೆಂದಿದನು ತಿಳಿಯಬೇಕೇ?

---

## ೩೬. ಭಕ್ತಿ

೧

ಹಾ! ಬಿದಿಯ ಮಾಟವೇ ಮಾಯಾ ಮನೋಹರದ
ತಿರೆಯಾಟವನೆ ಹೂಡಿ ನಗುತಿರುವನು.
ಆ ನಗೆಯ ತೆರೆಯಿಂದ ಬಂದ ಮಂದಾನಿಲನು
ಸಂಜೀವನದ ಸ್ಪರ್ಶವನ್ನೀವನು.

೨

ಸುತ್ತು ನೆರೆದಿದೆ ಮಂದಿ, ಆಟಗಾರನು ನಡುವೆ
ಕುಳಿತು ನಗುತಿಹನೇಕೆ? ತನ್ನನರಸಿ-
ಎಲ್ಲೆಲ್ಲೂ ಸುತ್ತಾಡಿ ಗದ್ದಲವನೆಬ್ಬಿಸುತ
ತನ್ನಿರವನರಿಯದರ ಕಂಡು ನೆನಸಿ,

೩

ಮೇಲೆ ಕೆಳಗೆಲ್ಲೆಲ್ಲು ಕಾಂಬ ಪ್ರಭೆಯನದೊಂದು
ಕಾರುತಿಹ ದೀಪವಿದೆ ಬಲು ದೂರಕೆ;
ನೇಹವೆಂಬುದೆ ಬತ್ತಿ, ಭೇದರಹಿತವೆ ಎಣ್ಣೆ,
ತನ್ನಿರವೆ ಹಣತಿಗೆಯು ಬೇರೇತಕೆ?

೪

'ಭಕ್ತಿ'ಯೆಂದರೆ ಮನದ ದಾಸತನವಲ್ಲ, ತಾ-
ನೆದ್ದು ಬಂದಿಹ ಶಯ್ಯೆಯನ್ನು ಸೇರಿ,
ನಿದ್ರಿಸುವ ತವಕದಂದದಿ ಪೂರ್ಣತೆಗೆ ಮರುಗಿ
ಮನವನದರೆಣಿಕೆಯಲೆ ಮುಳುಗಿಸುವುದು.

೫

ಗುರು ತನ್ನ ಶಿಷ್ಯರನು ಭಿಕ್ಷೆಗೆನ್ನುತ ಕಳುಹಿ-
ದಂತೆಮ್ಮ ತಿರಿದು ತರುವಂತೆ ಪೇಳಿ,
ಮನದ ಕಂತೆಯನಿತ್ತು ಕತ್ತಲೆಯ ಈ ಜಗಕೆ
ವಿಧಿಯು ಕಳುಹಿದನು ನಿಷ್ಕರುಣೆಯಲ್ಲಿ.

೬

ಅವನಾಣತಿಯನಾಂತು ಹೊರಟು ಬಂದರೆ ನಾವು
ನಾಲಿಗೆಯ ದಾಸರಾಗಿರುವ ತನಕ
ಅಧರಕ್ಕೆ ಕಹಿಯಾದ ಉದರಕ್ಕೆ ಸಿಹಿಯಾದ
ಭಕುತಿ ತಿಂಡಿಯ ಭಿಕ್ಷೆಯನೆ ಪಡೆಯೆವು.

೭

'ಎಲ್ಲ ನಿನ್ನದೆ', 'ನೀನೆ ಎಲ್ಲ'ವೆಂದೆಣಿಸಿದರೆ
'ಎಲ್ಲೆಲ್ಲು 'ನೀನೆ-ನಾನೆ'ಂದು ನೀನು
ಉಲ್ಲಸಿತ ಮೆದುನಗೆಯೊಳೆನ್ನನಪ್ಪುವ ಸಮಯ
'ನಾನೆಷ್ಟರವ'ನೆಂದು ಅನಿಸದಿರಲೀ.

---

## ೩೭. ಕಂಬನಿ

೧

ಕಂಬನಿಯೆ! ನೀನೆಲ್ಲಿಯಿರುವೆಯೆಂದುಸುರು?
ಸಂತಾಪ, ಸಂಕಷ್ಟ ನಿನಗದೇಂಬಸಿರು?
ಸಂತೋಷ ಸಂಭ್ರಮಗಳೇಂ ನಿನ್ನ ಉಸಿರು?
ಕಣ್ಣು ತೊಳೆಯಲಿಕಾಗಿ ನಿನ್ನದೇಂ ಒಸರು?

೨

ಮಾನಸ ಸರೋವರವೊ ನಿನ್ನಗಮುಸ್ಥಾನ?
‘ಭ್ರೂಮಧ್ಯಕಾಶಿ’ ಎನೆ ಗಂಗೆಗೆ ಸಮಾನ
ಅತಿರೇಕ ಪರ್ವತವೊ ನೀನೊಗೆದ ಮೂಲ?
ಜ್ಞಾನ-ಅಜ್ಞಾನ ಸಂಘರ್ಷಣವೊ ಹೇಳ?

೩

ಪಿಂಡ ಬ್ರಹ್ಮಾಂಡ ತತ್ವಗಳೈಕ್ಯತೆಯಲಿ,
ಹೊಂದಿಕೊಂಡಿಹುದೆಂಬುದನು ಸಾರಲಿಲ್ಲಿ,
ಜಗದಿ ಶುದ್ಧೋದಕ ಸಮುದ್ರವಿರುವಂತೆ,
ತನುವಿನಲಿ ನೀನೆ ನಿರ್ಮಲ ಶರಧಿಯಂತೆ!

೪

ಪತಿತ ಪಾವನಕಾಗಿ ಗಂಗೆ ಹರಿವಂತೆ,
ಅಘವ ತೊಳೆಯಲಿಕಾಗಿ ನೀ ಹರಿವೆಯಂತೆ,
ಪಾಪ ಸಂತಾಪದಲಿ, ನಾಶವಾಗುವುದೇ?
ನಿನ್ನ ನಿರ್ಮಲ ಜಲದಿ ತೊಳೆದು ಹೋಗುವುದೆ?

೫

ಜೀವನದ ಸಂಗ್ರಹದ ಶರಧಿಯನೆ ಕಾಸಿ,
ಆಶಾತರಣಿಯಧಿಕ ನಗುವನದೊ ಸಹಸಿ;
ಹಗುರದಲಿ ಮೇಲೇಳ್ವ ಮುಗಿಲುಗಳನೆತ್ತಿ
ಮನಪವನ ಸಾಗುತಿದೆ ತಾನೆ ಮುಂದೊತ್ತಿ.

೬

ಅಮಿತಾದ್ರಿಯದೊ ಮುಗಿಲ ತಡೆದು ನಿಲ್ಲಿಸಿತು;
ಪರ್ವತಾಗ್ರದ ಶಾಂತಿ ಸೊದೆಯನುಣ್ಣಿಸಿತು;
ಮುಸಲ ಧಾರೆಯ ಮಳೆಯನಲ್ಲೆ ಕರೆಯಿಸಿತು;
ಬೇಸಗೆಯ ಬಿಸಿಯುಸಿರನಾಗಳಾರಿಸಿತು.

೭

ಕಂಬನಿಯು ಕಣ್ಣಹನಿಯೋ? ನೀರಹನಿಯೋ?
ಆ ದಿವ್ಯ ಮುಳೆಯು ಹೊಡೆತದ ಹನಿಯು ಗನಿಯೊ?
ಕಂಬನಿಯೆ! ಕಣ್ಣಿನಿಂದಲೆ ಪಾಪವೆಂದು
ಅದನು ತೊಳೆಯಲಿಕಾಗಿ ಸೃಜಿಸಿದನೆ ಬಂಧು?

೮

ದುಗುಡ, ಸಂಕಟ, ವಿರಹ, ಸಂಕಲ್ಪ, ವಿಘ್ನಂ
ನಿನ್ನ ಹೊರದೂಡುವುದೆ ನೀನಾಗ ನಗ್ನಂ!
ಜೀವಿಗಳ ಕಣ್ಣತುದಿಯಿಂದಿಳಿದು ಬಂದು
ಪಾವನತೆಯುಲಿ ಪೊರೆಯೊ ಜ್ಞಾನಾಕ್ಷಿ ಬಂಧು!

---

## ೩೮. ಕಬ್ಬಿಗರು

೧

ಮಾತಿನಲಿ ಭೂತಳವ
ತೋರಿ ಕೊಡುವೆವು ನಾವು
ನೀತಿಯಲಿ ಭೀತಿಯನು
ದೂಡುವವರಾವು.

೨

ಬಣ್ಣನೆಯ ಮಣಿಗಳನು
ತತ್ವದಾ ದಾರದಲಿ
ಕೋದು ಹಾರವ ಮಾಡಿ
ತೊಡಿಸುವೆವು ನಾವು.

೩

ಕತ್ತಲೆಯ ಗುಹೆಯಲ್ಲಿ
ಹುಡುಕಿ ರವಿ ಕಿರಣಗಳ
ತತ್ತ್ವದ ಪ್ರಕಾಶವನು
ಬೀರುವೆವು ನಾವು.

೪

ದೇವ ನಿರ್ಮಾಣದೀ
ಸೃಷ್ಟಿ ಲೀಲೆಗಳನ್ನು
ಅವನ ನಿಯಮಗಳನ್ನು
ಮುಗುಮುಗುಚಿ ನೋಡಿ.

೫

ಅದನಿದಕೆ ಇದನದಕೆ
ಜತೆಗಟ್ಟಿ ದನಿಗೊಡುತ
ಜಗಕೆ ವೈಚಿತ್ರ್ಯಗಳ
ತೋರುವವರಾವು.

೬

ಒಂದೆ ಮಾತಿನಲಿ ಬ್ರ-
ಹ್ಮಾಂಡವೆಲ್ಲವ ತುಂಬಿ
ನಕ್ಕು ನಗಿಸುತ ಕುಣಿವ
ನಟವಿಗರು ನಾವು.

೭

ತ್ರಿಭುವನ ಸಂಚರಿಸಿ
ಕಾಲ ದೇಶಕೆ ತಕ್ಕ
ಹಾಡುಗಳನೊಪ್ಪಿಸುತ
ತಣಿವವರು ನಾವು.

೮

ಏನ ಪೇಳಿದರೊಂದು
ಏಕ ತತ್ವಕೆ ಕುಂದು
ಬಾರದಂದದಿ ನುಡಿದು
ನಡೆವವರು ನಾವು.

೯

ದೈವ ಸೃಷ್ಟಿಯೊಳೊಂದು
ಕವಿ ಸೃಷ್ಟಿಯನು ಕಟ್ಟಿ
ಇದುವೆ ಗಿಟ ಅದುವೆ ಹುಸಿ
ಎನ್ನುವೆವು ನಾವು.

೧೦

ಆತ್ಮ ಪ್ರಸನ್ನತೆಯ
ಜೀವಾಳದಲಿ ತೊನೆವ
ಕವಿತೆ ಕಮಲದ ಮಧುವ
ಹೀರಿ ಬುಧ ಜನವೂ

೧೧

ತಣಿವಂತೆ ಎದೆಯಿತ್ತು
ಜನುಮ ಸಾರ್ಥಕ ಮಾಡಿ
ಕೀರ್ತಿ ದೇಹವನುಳಿಸಿ
ತೆರಳುವೆವು ನಾವು.

---

## ೩೯. ಶ್ರೀಕೃಷ್ಣಬೋಧಾಮೃತ

೧

ಹಸ್ತಿನಾವತಿಯ ಸಾಮ್ರಾಜ್ಯಕೋಸುಗ ಪಾಂಡು
ಸುತರು ಕೌರವರು ಕುರುಭೂಮಿಯಲ್ಲಿ
ಇತ್ತಂಡವಾಗಿ ನೆರೆದಿರಲು ಧುರಕೆಂದೆನುತ
ಪೃಥ್ವಿ ನಡುಗಿತು ವೀರ ಘರ್ಜನೆಯಲಿ.

೨

ಮೂಡು-ಪಡು ಕಡಲಿನಂತಿಹ ಸೇನೆಗಳ ನಡುವೆ
ಭರತಾತ್ಮಜನು ರಥವ ನಿಲಿಸಿ ತನ್ನ
ಗುರುಹಿರಿಯರನು ಬಂಧುಬಾಂಧವರನೀಕ್ಷಿಸಲು
ವೈರವಳಿಯಿತು, ಮೋಹ ಕವಿಯಿತವನ.

೩

ಕಾಡಿನಿಂದೆತ್ತಿ ನಾಡಿಗೆ ತಂದು ಪ್ರೇಮದಲಿ
ಸಲಹಿದ ಪಿತಾಮಹನ, ಬಿಲುವಿದ್ಯೆಯ
ಕಲಿಸಿರುವ ಕಲಶಸಂಭವನ, ನೃಪ ಧರ್ಮವನು
ಒಲಿದೊರೆದ ಗುರುಕೃಪಾಚಾರ್ಯರನ್ನು

೪

ಧೃತರಾಷ್ಟ್ರ, ಗಾಂಧಾರಿ, ಶಲ್ಯ, ಸೈಂಧವ, ಶಕುನಿ
ಮೊದಲಾದ ಗುರುಹಿರಿಯರನು ವಧಿಸುತ
ದುರ್ಯೋಧನಾದಿ ಸೋದರ ಶತವ ಸಂಹರಿಸಿ
ಪಡೆವ ವಿಜಯೋತ್ಸವದೊಳೇನು ವಿಹಿತ?

೫

ರಿಪುಮೋಹರವ ಸೀಳಿ, ವಿಜಯ ಸಂತಸ ತಾಳಿ
ಚರಣಕೆರಗುವ ನನ್ನ ನಗುತ ಹರಸಿ
ಅಪ್ಪಿ ಮುದ್ದಿಸುವವರ ತೀಕ್ಷ್ಣ ಶರಹತಿಯಿಂದ
ರಾಜ್ಯ ಲೋಭದಿ ವಧಿಸಬೇಕೆ ಹಗೆವೆರಸಿ?

೬

ಶ್ರೀಹರಿಯೆ! ಗುರುಹಿರಿಯ ಬಂಧುಬಾಂಧವರನ್ನು
ವಧಿಸಲೆನಗಿಹಪರದಿ ದೊರೆವ ಸುಖವು-
ಬೇಡ; ವನವಾಸದತಿ ಕಷ್ಟವಾದರು ಲೇಸು
ಕಂಪಿಸುವುದೆನ್ನ ತನುಮನವು ಧಿಟವು.

೭

ಕಂಬನಿಯ ಸುರಿಸಿ ಕೈಮುಗಿದು ಬೇಡುವ ನರನ
ಹೃದಯ ದೌರ್ಬಲ್ಯವನ್ನರಿತು ಹರಿಯು
ಮನದೊಳಗೆ ನಗುತ ನುಡಿದನು, ಎಲವೊ ಕೌಂತೇಯ!
ಬಾಷ್ಪಾಂಜಲಿಯಿದೇನು? ಏನಿದೀ ಪರಿಯು?

೮

ಪಾಂಡುಭೂಪತಿಯಾಳಿರುವ ಹಸ್ತಿನಾಪುರವ
ಧೃತರಾಷ್ಟ್ರ ಸುತರಾಳಿ ಮೆರೆಯುತಿರಲು
ಬಂಧುಹತ್ಯಾದೋಷವೆಂದು ದುಃಖಿಸುತಿರುವೆ
ಹೇಡಿಯಂದದಿ, ಕ್ಷಾತ್ರಧರ್ಮನಿಯಿರುತಿರಲು.

೯

ಎಳವೆಯಲಿ ವಿಪಿನದಿಂ ನಗರವನು ಸೇರಿದಿರಿ.
ಹಲವು ವಿಧದಲಿ ನಿಮಗೆ ಕೌರವಾದಿಗಳು
ಅಂದಿನಿಂದಿದುವರೆಗು ನಿಮ್ಮ ಸರ್ವಸ್ವವನು
ಸುಲಿದಿರಲು ಮಮತೆಗನುವಿಹುದೆ ಹೇಳು?

೧೦

ಜಪ, ತಪ, ಸ್ವಾಧ್ಯಾಯ, ಶಾಂತಿ, ದಾಂತಿಗಳಿಂದ
ಜ್ಞಾನವನು ಸಂಗ್ರಹಿಸಿ ದಾನಗೈದು
ವಿಶ್ವಶಾಂತಿಯ ಗೈವ ಹಿರಿಯ ವರ್ಣದ ಕರ್ಮ
ಜನಮನಕೆ ಬೆಳಕನ್ನೆ ಪಸರಿಸುವುದು.

೧೧

ಮೂರು ವರ್ಣದ ಜನರ ಜೀವವನು, ಸಾತ್ವಿಕ
ಶಕ್ತಿಯಲಿ ಪೊರೆವ ಬಲ ಶೌರ್ಯ ಧೈರ್ಯ
ತುಂಬಿ ತುಳುಕುತ ಧರೆಯನಾಳಿ ಧರ್ಮದಿ ನಿರತ
ಪ್ರೇಮದಲಿ ಸಲಹುವುದು ಕ್ಷತ್ರಿಯನ ಕಾರ್ಯ

೧೨

ಎದುರಾದವರನಿರಿದು, ಬಾಗಿದವರನು ಪೊರೆದು,
ಸಜ್ಜನರ ಸಲಹಿ, ಸಂಹರಿಸಿ ದುರ್ಜನರ
ಕ್ಷಾತ್ರ ತೇಜದಿ ಲೋಕವನು ಸೂರ್ಯನಂದದಲಿ
ಬೆಳಗಿಸಲಹುವ ರಾಜಧರ್ಮವತಿ ಪ್ರಖರ.

೧೩

ಜನಿಸಿರುವ ಕುಲದ ಕರ್ಮವೆ ಸ್ವಧರ್ಮವು ನರಗೆ
ಪರಧರ್ಮವತಿಭಯವನೀಯುತಿಹುದು
ಪಾಪ ಪುಣ್ಯಗಳಿರಲಿ, ಸ್ವರ್ಗನರಕಗಳಿರಲಿ
ತನ್ನ ಧರ್ಮದಿ ತಾನು ಮಡಿಯೆ ಲೇಸಹುದು.

೧೪

ದೇಹಧಾರಿಗಳಾದ ಜೀವಿಗಳು ಜೀವನದ
ಹೋರಾಟದಲಿ ತಮ್ಮ ಕರ್ತವ್ಯವ
ಮರೆತು ಭಯ ಭ್ರಾಂತಿಯಲಿ ನಿನ್ನಂತೆ ದುಃಖಿಸುತ
ಕೆಡಿಸುವರು ಹಿರಿಯ ಮಾನವ ಜನ್ಮವ.

೧೫

ಧುರದಿ ಜೈಸಲು ಧರೆಯ ಭೋಗ, ಮಡಿದರೆ ಪರದಿ
ನರನೆ, ದೊರೆವುದು ವೀರ ಸ್ವರ್ಗ ನಿನಗೆ;
ಧುರಕಂಜಿ ವನವ ಸೇರಲು ದುರ್ಯಶವು ಜಗದಿ;
ವನದ ಪಶು ಜೀವನವೆ ಗತಿಯು ಕೊನೆಗೆ.

೧೬

"ಸಂಸಾರಿ! ನಿನ್ನ ದುಃಖಾಶ್ರುವನ್ನೆಡಗಯ್ಯೊ
ಒರಸು; ಬಲಗೈಯಿಂದ ತೋರು ಜಗಕೆ
ಸತ್ಪಥವ"ನೆಂದು ನುಡಿ ಮೊಳಗುತಿದೆ ಪೂರ್ಣತೆಯ
ನಾಂತ ಹೃದಯನಿಕುಂಜದಿಂದ ನಭಕೆ.

೧೭

ವೀರವಿಜಯನೆ, ನಿನ್ನ ಕಲಿತನಕೆ ಕೊರ್ಗಣಿಗೆ
ಅಳಿವುದೀನಶ್ವರದ ದೇಹಮಾತ್ರ;
ಆತ್ಮನದನಗಲಿ ಬೇರೊಂದು ದೇಹವ ಸೇರಿ
ಜನಿಸುವನು, ಇದು ಜಗದ ಕರ್ಮ ಸೂತ್ರ.

೧೮

ಆತ್ಮನಮರನು, ದೇಹವಸ್ಥಿರವು, ಜೀವನವು
ಪೂರ್ವಕರ್ಮವಿಪಾಕದಾಡು ಹೊಲವು;
ತ್ರಿಭುವನದ ಸೃಷ್ಟಿ, ಸ್ಥಿತಿ, ಲಯಕರ್ತನಾಗಿರುವ
ಆತ್ಮನನು ವಧಿಸುವುದೆ ನಿನ್ನ ಪಶುಬಲವು?

೧೯

ನಯನ ಗೋಚರವಾದ ಬ್ರಹ್ಮಾಂಡವಿದು ನಿನ್ನ
ತನುವಿನಂತೆಯೆ ಪಂಚ ಭೂತ ಸೃಷ್ಟಿ
ಸರ್ವಕರ್ಮಕೆ ಸರ್ವಚೇತನಕೆ ಕಾರಣನು
ಜ್ಞಾನಗಮ್ಯನು; ಅವನದೇ ಸಮಷ್ಟಿ.

೨೦

ಜ್ಞಾನೇಂದ್ರಿಯಗಳೈದು, ಕರ್ಮೇಂದ್ರಿಯಗಳೈದು
ಹತ್ತು ಬಾಗಿಲುಗಳೀ ದೇಹದರಮನೆಗೆ
ಮೋಹದಾ ಮುಸುಕಿನಲಿ ಮಲಗಿಹನು ಜೀವಾತ್ಮ
ದೂತನೀ ಮನಸು ಚಲಿಸುವುದು ಹೊರಗೇ.

೨೧

ಸುಖ, ದುಃಖ, ಜಯ, ಪರಾಜಯ, ಹಾನಿ, ವೃದ್ಧಿಗಳ
ಖೇದ, ಮೋದಗಳಿರದ ಸ್ಥಿರಚಿತ್ತದಿ
ಹೃದಯದಿಂದುದಿಸುತಿಹ ವೀರವಾಣಿಯನರಿತು
ಕೃತಕರ್ಮನಾಗಿ ಬೆಳಗಿಹದಿ ಪರದಿ.

೨೨

ಕಲ್ಲು, ಮರ, ಹಕ್ಕಿ, ಮೃಗಗಳಿಗಿಂತ ಮನುಜತನ
ಹಿರಿದು; ಮನವೇ ಮನುಜತನಕೆ ಮೂಲ
ಗೈವ ಕರ್ಮದಿ ಕೊನೆಗೆ ದೊರೆವ ಫಲವನು ನೆನೆದು
ಮರುಗದಿರು; ಚಂಚಲದ ಮನವು ವಿಫಲ.

೨೩

ಸ್ಥಿರಚಿತ್ತ ಜೀವಿಗಳ್ಗೆಯುವಿತ್ತ ಪುರುಷಾರ್ಥ
ಸಾಧನವು; ಸದ್ಗತಿಗೆ ಸನ್ಮಾರ್ಗವು
ಭೋಗ-ಯೋಗಗಳೆರಡನೀಯುವುದು ಕಾಯುವುದು;
ಮನುಜನೇ ದೇವನೀ ಬುವಿ ಸ್ವರ್ಗವು

೨೪

ಪಂಚಭೂತಗಳು, ಜೀವಾವಳಿಗಳೆಲ್ಲವೂ
ಕರ್ಮವಶರಾಗಿಹರು, ಕರ್ಮಚಕ್ರವಿದು
ಎಡೆಬಿಡದೆ ಚಲಿಸುತಿದೆ; ನಭದಿ ರವಿ, ಶಶಿ, ತಾರೆ
ಬೆಳಗುತಿವೆ; ಮೇಘವದೊ ಮಳೆಗರೆವುದು;

೨೫

ವಿಶ್ವರಕ್ಷಕನಿಹನು ಸರ್ವಾಂತರಾತ್ಮದಲಿ
ಚಲಿಸದೆಯೆ ಜ್ವಲಿಸುತಿಹ ಸೊಡರಿನಂತೆ!
ವಿಸುಕದವನನುವಿಲ್ಲದೊಂದು ತೃಣವೀ ಜಗದಿ
ನಾನೆಂಬ ಮಮಕಾರವೇತಕಾಂತೆ?

೨೬

ವಿಶ್ವದ ವಿಶಾಲ ರೂಪವ ನೋಡಲರೆಚಣದಿ
ಕೋಟಿ ಜೀವಗಳುದಿಸಿ ನಶಿಸುತಿಹವು
ಸಾಟಿಯಿಲ್ಲದೆ ನಡೆವ ಬಿಡುವಿರದ ಕರ್ಮಗಳ
ಕೋಟಲೆಯರಂಗವೀ ಧರೆಯ ಜೀವನವು.

೧೭

ಸದುಪದೇಶಕೆ ನರನ ಮನದ ಸಂಶಯವಳಿಯು
ಡಿರಲು, ಕೇಶವನಾಗ ವಿಶ್ವರೂಪವನು
ತೋರಿದನು; ಕಂಡು ಪಾರ್ಥನು ಭಯದಿ ನಡುಗಿದನು
ಪಾದಕಭಿನಮಿಸಿ ವಿಧವಿಧದಿ ಸ್ತುತಿಸಿದನು

೧೮

ಪ್ರಲಯ ರುದ್ರನು ಕೋಟಿ ರೂಪದಿಂದೊಗೆದಂತೆ,
ಜಗದಾದಿಶಕ್ತಿ ಭೈರವಿಯು ಮುನಿದಂತೆ,
ತ್ರಿಭುವನವ ಸಿಗಿಬಗಿದು ಪ್ರಲಯಾಗ್ನಿ ಸುಡುವಂತೆ,
ಕಂಡು ನಡುಗಿದ ಪಾರ್ಥ ಕವಿಯೆ ಚಿಂತೆ!

೧೯

ಮನ್ನಿಸೆನ್ನನು, ಸರ್ವಶಕ್ತ, ಕರುಣಾಶರಧಿ
ಸರ್ವಾಪರಾಧವನು ಕ್ಷಮಿಸು ನನ್ನ
ಸರ್ವಸ್ವವನು ಪಾದಕರ್ಪಿಸುವೆ, ನಿನ್ನಾಜ್ಞೆ
ಯಂತೆ ನಡೆವೆನು ದಯವನಿರಿಸು ಪೂರ್ಣ.

೨೦

"ಧನುವ ಝೇಂಕರಿಸುತ್ತ ಹೃದಯದಲಿ ಕುದಿಯುತ್ತ
ಕೆಂಗಿಡಿಯನುಗುಳಿ ಎದೆಯೊಡ್ಡಿ ನಿಂದಿರುವ
ರಿಪುರಾಳಿಗಳ ಗಳವ ಕತ್ತರಿಸು ಮಾರ್ಗಣದಿ
ಸವ್ಯಸಾಚಿಯೆ! ತೋರು, ತೋರು, ಪೌರುಷವ"

## ೪೦. ತ್ರಿಕಾಲ

### I

೧

ಹದಿನಾರನೆ ಹದಿನೇಳನೆ ಶತಮಾನ!
ಸಾವಿರ ಸಾವಿರ ರಾಜರ
ಅಧಿಕಾರದ ತಾಣ.
ಹಿಮಪರ್ವತ ತಲೆಯಾಗಿ
ತೆಂಕಣ ಭೂಶಿರ ಪಾದವು
ಭರತಾಂಬೆಯು ಆಗಿ

೨

ರಾಜನ ಮತಧರ್ಮಗಳು
ರಾಜನ ನಡೆನುಡಿ ಗುಣಗಳು
ಪ್ರಜೆಗಳು ಅನುಸರಿಸಿ
ರಾಜ್ಯವ ಪಡೆವಾಸೆಯಲಿ
ದಿನದಿನವೂ ರಣಕಣದಲಿ
ರಣವಧುವನೆ ವರಿಸಿ

೩

ವಿಜ್ಞಾನದ ನವಕಾಳಿಯು
ಕ್ರಾಂತಿಯು ಕರ್ಕಶವಿಲ್ಲ
ದೈಹಿಕ ಬಲವೆಲ್ಲ
ಒಬ್ಬಿಬ್ಬರು ಸುಖಭೋಗದಿ
ಜನರನು ಸಲಹುತ ಪ್ರೇಮದಿ
ಇದ್ದರು, ಧುರವಿಲ್ಲ.

೪

ಕೃಷಿ ವ್ಯಾಪಾರವು ಜನಕೆ
ಗೋಸೇವೆಯು ಜೀವನಕೆ
ಅನ್ನವ ಕೊಡುತಿತ್ತು
ವಿವಿಧ ಕಲಾವಿಭವಗಳು
ಜನರೆಲ್ಲರು ಪ್ರೀತಿಯೊಳು
ಬಾಳುವುದಿತ್ತು.

೫

ನಮ್ಮೊಳಗಿನ ಕಚ್ಚಾಟದಿ
ಹೊರಗಿನ ಜನವಿರಲಿಲ್ಲ
ಹಗೆ-ಕೆಳೆ ನಮ್ಮೊಳಗೇ.
ಪಡುಗಡಲಿನ ಮೇಲಿಂದ
ವ್ಯಾಪಾರಕ್ಕೆನೆ ಬಂದರು
ಬಿಳಿ ಜನರೀ ನೆಲಕೇ.

೬

ಸಂಪತ್ತಿನ ಸೌಭಾಗ್ಯದ
ಆಗರದೀನೆಲದಾಸೆಯು
ನೆಲಸಿತು ಮನದೊಳಗೆ
ಅಲ್ಲಲ್ಲಿಹ ರಾಜರಲಿ
ಹಗೆತನವನು ಹೆಚ್ಚಿಸಿದರು
ರಣಮಾರಣವೆಲ್ಲ.

## II

೭

ಜಯುವಪಜಯುವೇನಿರಲಿ
ನೆಲದೊಡೆತನವೆಮಗಿರಲಿ
ಎಂದೆಲ್ಲವ ಗೈದು
ಹದಿನೆಂಟನೆ ಶತಮಾನ
ಅಧಿಕಾರದ ಅಪಹರಣ
ಆಯಿತು ಪರಿಪೂರ್ಣ.

೮

ಜನರೆಲ್ಲರು ಒಂದಾದರೆ
ನಮ್ಮಾಳಿಕೆಗದೆ ತೊಂದರೆ
ಎಂಬುದ ನೆನಪಿಟ್ಟು!
ಕಾಣದ ಹಗ್ಗದ ಕಟ್ಟು
ಒಳಗೊಳಗೇ ಒಳಪೆಟ್ಟು
ಕದಲದ ರೀತಿಯಲಿ!

೯

ಭಾರತದಾದ್ಯಂತವನು
ಅಧಿಕಾರದಿ, ಆಡಳಿತೆಯು
ತೇರಿಗೆ ಬಿಗಿದು
ನಿರ್ಭಯದಲಿ ಎಲ್ಲವರು
ಜೀವಿಸಲನುವನುಗೈದರು
ವೀರಪರಿಶ್ರಮದಿ.

೧೦

ದೇಶದ ಏಳಿಗೆಯಾಯಿತು
ಕೃತಕತೆ ಬಹುವಿಧ ಬೆಳೆಯಿತು
ಸಹಜತೆಯಳಿದು
ಪಡುವಣ ಯಂತ್ರದ ರಾಕ್ಷಸ
ನೊಡಲಿಗೆ ನಾಡನು ಬಿಗಿದರು
ಕದಲದ ತೆರದಿ.

೧೧

ಬದುಕಲು ಭರತಾತ್ಮಜನು
ಏನೊಂದಕು ಬಿಳಿಮುಖವನು
ಪೂಜಿಸುವುದನು
ಸಹಿಸದೆ ಭಾರತ ಜನನಿ
ಮುರಿದೆದ್ದಳು ಪ್ರೇರಿಸಿದಳು
ಸುತಕೋಟಿಯ ತಾನು.

೧೨

ಜನಮನವೀ ಬಂಧನವ
ಹರಿದೊಗೆಯಲು ಚೇತನವ
ಬೆಳೆಯಿಸುತಿತ್ತು
ಆಗ ಮಹಾತ್ಮನು ಬಂದು
ಪಥವನು ಬಿಡುಗಡೆಗೆಂದು
ತೋರಿದನೆಲ್ಲರಿಗೇ.

## III

೧೩

ಸತ್ಯ ಅಹಿಂಸೆಯ ಪ್ರೇಮದ
ಪಥದಲಿ ಜನರನು ಸೇರಿಸಿ
ದೇಶದ ಬಿಡುಗಡೆಗೆ;
ಸಹಜತೆ, ಸ್ವಾತಂತ್ರ್ಯದ ಸವಿ-
ಯುಣಿಸಿ ತಣಿಸಿ ಸೇರಿಸಿದರು
ಹೋರಾಟದ ಪಡೆಗೆ.

೧೪

ಒಕ್ಕೊರಲಿನ ದನಿಯಿಂದ
ಒಗ್ಗಟ್ಟಿನ ಬಲದಿಂದ
ಸತ್ಯಾಗ್ರಹ ಸಮರ
ಪರತಂತ್ರದ ಸೆರೆಯಿಂದ
ಹೊರಬಂದೆವು ನಲವಿಂದ
ಜೈಸುತ ಬವರ

೧೫

ಎರಡಾಯಿತು ಭಾರತತನು
ಚಿಮ್ಮಿತು, ವಿಧವಿಧವಿಷವನು
ಬೆರಗಾಗಲು ಜನರು
ದೇಶದ ನಾವೆಯು ನಾವಿಕ-
ರೊಂದೇ ಗುರಿ, ಒಂದೇ ಮನ-
ದಿಂದಲಿ ನಡೆಸಿದರು.

೧೬

ದೀನರ ಹೀನರ ತುಳಿದು
ಧನಬಲದಲಿನಲಿನಲಿದು
ಗತಕಾಲದ ಹಾಗೆ
ಪತಿತರ ಕರುಳಿನ ಕೆರಳಿದ
ನುಡಿಕಿಡಿಗಳು ಕೇಳುತಲಿವೆ
ಇರಬೇಕೇ ಹೇಗೆ?

೧೭

ಸ್ವಾತಂತ್ರ್ಯದ ನೇತಾರನು
ಗಾಂಧೀಜೀ ನುಡಿದುದನು
ಘೋಷಿಸುತಿಹರೆಲ್ಲ.
ದಿನದಿನಕೂ ಕ್ಷಣಕ್ಷಣಕೂ
ದಾನವ ಸ್ವಾರ್ಥವು ಬೆಳೆದು
ಮಾನವತನವಿಲ್ಲ.

೧೮

ಅತಿಯಾಗಲಿ, ಮಿತಿಮೀರಲಿ
ಅಧಿಕಾರದ ಬಲುಮೆಯುಲಿ
ಆಗಲಿ ಬಲು ಧಾಳಿ;
ಅದನೆಲ್ಲವ ಸಿಗಿ ಬಗಿದೂ
ಬರುವಳು ನಗೆಯುಲಿ ನಲಿದೂ
ಕ್ರಾಂತಿಯ ಕಾಳಿ.

೧೯

ಸಾವಿರಭೇದಗಳಳಿದು,
ಸೋದರಭಾವನೆ ಬೆಳೆದು
ಬರಲಿದೆ ಸುಖ ಶಾಂತಿ;
ಭಾರತ ಸಂಸ್ಕೃತಿ ಬೆಳಗಿ
ಕವಿದಿಹ ಕತ್ತಲೆ ತೊಲಗಿ
ದೊರೆವುದು ಸುಖಶಾಂತಿ.

# ೪೧. ಮರುಗುವ ಮಹಾತ್ಮನಿಗೆ

ಓ ನನ್ನ ಸೋದರರೆ, ಸೋದರಿಯರೇ!
ಕಾಣದಿಹ ಲೋಕದಲಿ ನಿಂತು ನಮ್ಮನು ನೋಡಿ
ಮರುಗುವ ಮಹಾತ್ಮನನು ಕಂಡಿರೇ? ಕಂಡವರು
ನಿಮ್ಮೊಳಿರಬಹುದು, ಮನದೊಳಗೆ ಮರುಗಿರಬಹುದು;
ದೇಹಧರ್ಮದ ಬಂಧನದಲಿ ಮರೆತಿರಬಹುದು;
ಮರೆತಿಲ್ಲ ನಾನದನೆ ಮರುಕೊಳಿಸುವೆನು ನಿಮಗೆ!

ಓ ಶಾಂತಿ ದೂತ, ಮೋಹನದಾಸ ಗಾಂಧೀಜಿ,
ಭಾರತದ ಭಾಗ್ಯ ನಿಧಿ, ಮರುಗುತಿಹೆಯೇಕಿಂತು?
ನಗುಮೊಗದಿ ಗೆಲುವಿಲ್ಲ, ನಯನದಲಿ ಬೆಳಕಿಲ್ಲ,
ಗದ್ಗದಿತ ಕಂಠದಲಿ ತಡೆತಡೆದು ನುಡಿಯುತಿಹ
ನಿನ್ನಮರವಾಣಿ ಏನೆಂದರಿಯದಾಗಿಹುದು?
ಭಾರತೆಗೆ ಬಾಷ್ಪಾಂಜಲಿಯು ಜಲಾಂಜಲಿಯೇಕೆ?

ದೇಶ ಸೇವೆಗೆ ಮೀಸಲಾಗಿರಿಸಿ ಜೀವನವ
ಸವೆದವರು ಅಧಿಕಾರ ಸೂತ್ರವನೆ ವಹಿಸಿರಲು,
ಆ ನಿನ್ನ ಪ್ರಿಯ ಶಿಷ್ಯರನು ವಿವಿಧ ರೂಪದಲಿ
ದುರ್ನೀತಿಗಳಿದಿರಿಸುವುದನು ಕಂಡು ಮರುಗುವೆಯ?
ದೀನ ಹೀನರ ನಿತ್ಯ ನರಕವಾಸವನರಿತು
ಮೂಕ ಮೀಲಿಯದ ಮಾನವೇದನೆಗೆ ಎದೆಸೋತು
ಸ್ವಾತಂತ್ರ್ಯವೆಂಬ ಸಂಜೀವನದಿ ಸರ್ವರಿಗು
ಜೀವದಾನವನೀವೆನೆಂದು ಸಾರಿದ ನೀನು
ಸ್ವಾತಂತ್ರ್ಯ ಭಾರತದಿ ಧನಿಕ ಪಾವನರೆಲ್ಲ
ಪತಿತರನು, ಬಡವರನು ದಿನದಿನವು ಕ್ಷಣಕ್ಷಣವು
ದಾಸನ ಸ್ವಾರ್ಥದಲಿ ತುಳಿದು ನರಳಿಸುವುದನು
ಕಂಡು ಕರಗುತ ಕಂಬನಿಯ ಸುರಿಸುವೆಯ ಏನು?

ಗುರುಹಿರಿಯ ಪೋಷಕರಾಗಿರದಾಗಿ ಬಡಜನರು
ಬೆವರ ಸುರಿಸದೆ ಸುಖವ ಬಯಸಿ ಹಿಂಸೆಯ ಗೈವ

ದುರುಳತೆಯ ಕಂಡು ದುಃಖವೆ ನಿನಗೆ ಬಾಪೂಜಿ?
ಬಾಳುವೆಗೆ ಕಣ್ಣು, ಸಂಸ್ಕೃತಿಯು ಸವಿಹಣ್ಣೆನುವ
ಆರ್ಯಮಹಿಳೆಯರಿಂದು ಬೆಲೆಗೆ ದೊರೆಯುವ ಹಣ್ಣಿ
ನಂತಾಗಿ, ಗಂಡು ಹೃದಯಕೆ ಬಿಸಿಲ್ಗುದುರೆಯನು
ತೋರುವರು; ಮರಿಸಿಂಹದಂತಿರುವ ನವಯುವಕ
ರಿಂದು ಜೀವನದ ಗುರಿಯನು ಹಿರಿಯತನವನ್ನು
ಎಣಿಸದೆಯೆ ಕಾಪಥವಿನೋದ ವಿಭ್ರಮರಾಗಿ
ರುವರು; ಭಾರತಪೇಳಿಗೆಯು ಗೈವ ನವತರುಣ
ತರುಣಿಯರ ಅವನತಿಯನರಿತು ಮರುಕವೆ ನಿನಗೆ
ಮಣ್ಣಿನಿಂದನ್ನವನು ಪಡೆದುಣ್ಣಲೀಯುತಿಹ
ರೈತನೆಂದಿನ ತೆರದಿ ದುಡಿಯದೆಯೆ ದುಡುಕುವನು;
ದುಡಿತಕ್ಕೆ ಬೆಲೆಕೊಡುವ ನೆಲದೊಡೆಯರನುದಿನವು
ಕೆಚ್ಚಲುಣ್ಣಿಯ ತೆರದಿ ರೈತ ಜೀವದ ರಕ್ತ
ಕುಡಿದು ಬೆಳೆದಿರಲದಕೆ ಮರುಗುತಿಹೆಯಾ ಹೇಳು?
ವರ್ತಕರ ನೋಡೆ, ಮಾಯೆಯ ಶೂರ್ಪನಖಿಯಂತೆ
ಹಳ್ಳಿಯನು ಹಾಳು ನರಕವ ಮಾಡಿ, ನಗರವನು
ಸ್ವರ್ಗನಂದನದಂತೆ ಮಾಡಿ ಸುಖಪಡುತಿಹರು;
ಧನಸಂಗ್ರಹವೆ ಜೀವನದ ಹಿರಿಯ ಗುರಿಯೆಂದು
ಧನಿಕರೊಡಗೂಡಿ ಬಡವರನು, ರೈತರನೆಲ್ಲ
ಪುತ್ಥಳಿಯ ಗಾಣದಲಿ ಹಿಂಡಿ ಹಿಳಿಯುವುದನ್ನು
ಕಂಡು ಕಣ್ಣೀರು ಕಾಲಾಗಿ ಹರಿವುದೆ ಹೇಳು?
ಪರದೇಶದಿಂದ ಬಂದಿಲ್ಲಿ ಸುಖಸಂಪದವ
ಪಡೆದು ಸುಖಿಸುವ ಜನರು ಜಾತಿ, ಮತ, ಧರ್ಮಗಳ
ನೆವದಿಂದ ನಮ್ಮ ಸರ್ವಸ್ವವನು ಸುಲಿಯುತಿರೆ,
"ಶಾಂತಮಿದು, ಪಾಪಮಿದು" ಎಂದು ಕಿವಿ ಕಣ್ಣುಗಳ
ಮುಚ್ಚಿರುವ ನಮ್ಮ ನಿರ್ವೀರ್ಯತೆಗೆ ಮರುಗುವೆಯ?
ಪ್ರಾಂತ, ನಡೆ, ನುಡಿಗಳಲಿ ಭೇದಭಾವನೆಗಳಲಿ
ನಮ್ಮವರೊಳಗೆ ನಾವೆ ಕಾದಾಡುವುದ ನೋಡಿ

ಓ ಮಹಾತ್ಮಾ ನಿನಗೆ ದುಃಖವಿಮ್ಮಡಿಸುವುದೆ?
ಸ್ವಾತಂತ್ರ್ಯವೆಂಬ ಕೈಬೆಳಕೆಮಗೆ ನೀನಿತ್ತು
ದೇಕೆ? ಸತ್ಪಥದಿ ಸುಖವಾಗಿ ಸಾಗುವುದಕ್ಕೆ!
ಕೈಬೆಳಕಿನಗ್ನಿಯಲಿ ನಮ್ಮ ಬದುಕನು ನಾವೆ
ಸುಡುತ ಹರುಷಿಸಿ ಕಡೆಗೆ ಪಡುವ ದುಃಖವ ಕಂಡು
ನಮ್ಮ ಪೌರುಷವ, ಚೈತನ್ಯವೆಲ್ಲವ ನಾವು
ದುರುಪಯೋಗಿಸುವುದನು ಕಂಡು ಕನಿಕರಿಸುವೆಯ?
ಅನ್ನ ಬಟ್ಟೆಯ ಕೊರತೆ ಅಳಿದಿಲ್ಲ, ವಿದ್ಯೆಯಲಿ
ಸ್ವಾವಲಂಬನದ ಪಥವನು ತೋರಿ ಕೊಡಲಿಲ್ಲ;
ವಿಜ್ಞಾನದಲಿ ಪರರ ಬೆಂಬಲದ ಬಂಧನವು
ಹರಿದಿಲ್ಲ; ದಿನದಿನಕೆ ಜನನವಿಮ್ಮಡಿಸುತಿರೆ,
ಜೀವನದ ಸುಖಭೋಗದಭಿಲಾಷೆ ಬೆಳೆಯುತಿರೆ,
ಭಿಕ್ಷುಕರಸಹ್ಯ ನವನರಕವನ್ನಳಿಸದಿರೆ,
ದೇಶವಿಕ್ಕಡಿಯಾಗಿ ಜನಿಸಿರುವ ದುರ್ವಿಧಿಯ
ದುರ್ವಿಲಾಸದಿ ತಮ್ಮ ಸರ್ವಸ್ವವನು ಕಳೆದು
ನಿತ್ಯ ದುಃಖಿಗಳಾದ ನಿರ್ಗತಿಕರಲೆದಾಟ
ನಿಲ್ಲದಿರೆ, ಪಡೆದ ಸ್ವಾತಂತ್ರ್ಯಕ್ಕೆ ಬೆಲೆಯಿಲ್ಲ,
ನೆಲೆಯಿಲ್ಲ, ಫಲವಿಲ್ಲವೆಂದರಿತು ದುಃಖಿಪೆಯ?
ಪರರಾಳಿಕೆಯ ಶಾಸನದ ಗದಾಘಾತದಲಿ
ಉಪವಾಸದಲಿ, ಬಂಧನದಲಿ ತನುವನು ಸವೆದು
ಸರ್ವರೂ ಸಮವೆಂದು ಕೂಡಿ ಬಾಳಲು ನಮಗೆ
ನೀನು ಪಡೆದಿತ್ತ ಸ್ವಾತಂತ್ರ್ಯ ಸುಧೆಯನು ತಾವೆ
ಅಧಿಕಾರ, ಧನ, ಪಾಶವಿಕ ಶಕ್ತಿಯಲಿ ಪ್ರಬಲ
ರಾದವರು ಸವಿದಬಲರನು ನರಳಿಸುತ್ತಿರಲು
ನಮಗೆ ಸುಖಶಾಂತಿ ದೊರೆಯಲು ನೀನೆ ಭಾರತಕೆ
ಮರಳಿ ಬಾ ಮರುಗಿದರೆ ಫಲವಿಲ್ಲ ಬಾಪೂಜಿ!
ನಮ್ಮ ಸರಕಾರವೆನ್ನುವ ಸಲಿಗೆ ಎಲ್ಲರಿಗು,
ಪ್ರೀತಿ, ನಂಬಿಗೆಯಿಲ್ಲ, ತ್ಯಾಗವೆಂಬುದೆ ಇಲ್ಲ;

ನೀನೋರ್ವನೇ ಕೃಷ್ಣನಂತೆ, ಧರ್ಮಜನಂತೆ,
ನೆಹರು, ಸರದಾರರನು ಭೀಮಾರ್ಜುನರ ಮಾಡಿ
ಸ್ವಾತಂತ್ರ್ಯ ಭಾರತಾಹವದಿ ಜಯವನು ಪಡೆದೆ;
ರಾಮಕೃಷ್ಣ-ನರೇಂದ್ರರಂತೆ ಬಾಪೂ-ನೆಹರು
ದೇಶದುನ್ನತಿಯ ಬಾಹ್ಯಾಂತರಂಗದಿ ಗೈದು
ದಿಗ್‌ದಿಗಂತದಿ ಕೀರ್ತಿ ವಿಶ್ರಾಂತವಾಗಿಹುದು.

ಸತ್ಯಸೇವಕರಾದ ಹರಿಜನರು, ಬಡಜನರು,
ನಿತ್ಯವೂ ನಿನ್ನೊಡನೆ ಕೂಡಿ ಬೆಳೆದಿಹ ಜನರು,
ನಿನ್ನಮರವಾಣಿಯನು ಕೇಳಿ ತಮ್ಮಸುದಿನದ
ನರಕವಾಸದಲಿ ಜೀವನದ ಕಗ್ಗತ್ತಲಲಿ
ಬೆಳಗುತಿಹ ಹಿರಿಚುಕ್ಕಿಯನು ಕನಸು ಕಂಡವರು
ಬಂದು ನಿನ್ನಡಿಯಲ್ಲಿ ನಿಂದು ಮರುಗುತ್ತಿಹರು;
ನಿನ್ನ ಕಂಬನಿಯನೊರಸುತ್ತ ಸಂತೈಸುವರು;
ಮರುಕದಿಂ ಮರುಕ ಪರಿಹರಿಸುವುದು; ನಗುಮುಖದಿ
ಹರಸು; ಕರುಣವನಿರಿಸು; ಸಹಜತೆಯ ಮಳೆಸುರಿಸು;
ಶಾಂತಿ ಸೌಹಾರ್ದಗಳ ಸುಧೆಯ ಕುಡಿಯಿಸು; ಭರತ
ಮಾತೆ ಚಿರನವಯೌವ್ವನದಿ ಮೆರೆಯುವಂದದಲಿ
ಭರತಾತ್ಮಜರ ಹೃದಯ ಮಲಿನತೆಯ ಪರಿಹರಿಸು.

# ಶುದ್ಧಾಶುದ್ಧ ಪತ್ರಿಕೆ

| ಪುಟ | ಪದ್ಯ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|---|
| 2 | 1 | 2 | ನುಗ್ಗಿಸುಧೇ | ಸುಗ್ಗಿಸುಧೇ |
| 2 | 1 | 4 | ರೋಶ | ರೋಷ |
| 4 | 1 | 7 | ಳೆಳಸುವುದು | ಲೆಳಸುವುದು |
| 4 | 3 | 1 | ನಿನ್ನ | ನೀನು |
| 4 | 3 | 2 | ತಿರುವೆನ್ನ | ತಿಹೆ ನಾನು |
| 5 | 2 | 1 | ಸೂರ್ಯಕಿರಣ | ಸೂರ್ಯನ ಕಿರಣ |
| 5 | 2 | 4 | ವಿಶ್ವಾಸ | ತೋಷ |
| 5 | 2 | 5 | ಶರಣನಾಗು | ಶರಣಾಗು |
| 5 | 3 | 2 | ಭೂರಂಗ | ಬುವಿರಂಗ |
| 7 | 3 | 3 | ಮುಗುಳಾಡುತ | ಮುಳುಗಾಡುತ |
| 8 | 3 | 4 | ಸೂಸತಿರೆ | ಸೂಸುತಿರೆ |
| 9 | 1 | 4 | ಸೂರೆಗೊಳ್ಳಲೀ | ಸೂರೆಗೊಳಲೀ |
| 9 | 2 | 4 | ಕೃತಕತೆಯು | ಸಹಜತೆಯು |
| 10 | 3 | 2 | ಒಂದೆ ಹಾರದ | ಒಂದೆ ದಾರದ |
| 10 | 6 | 4 | ದಡಸೇರಬೇಕು | ದಡವ ಸೇರಬೇಕು |
| 11 | 2 | 1 | ಬಾಯಿತೆರೆದು | ಬಾಯುತೆರೆದು |
| 11 | 7 | 3 | ಮಡಗುತದದು | ಮಡಗುತದನು |
| 11 | 10 | 4 | ಬಲ್ಲಹ ಸುಗುಣಾಕರ | ಬಲ್ಲಹನು ಗುಣಾಕರ |
| 12 | 3 | 6 | ಕಾಡುವುದೇ ಬಗೆ | ಕಾಡುವುದೇಂ ಬಗೆ |
| 12 | 4 | 6 | ನೀವೆಲ್ಲರೂ | ನೀವೆಲ್ಲವರೂ |
| 12 | 4 | 10 | ದೊರೆವೆನು | ದೊರೆವನು |
| 13 | 2 | 4 | ಲೀಲೆಯು . | ಲೀಲೆಯುಲಿ |
| 14 | 6 | 3 | ಬೆಳೆಬೆಳೆಸು | ಬೆಳೆಸು |
| 15 | 3 | 1 | ಉರಿಯುವ | ಉರಿವ |
| 15 | 4 | 2 | ವೆಳಕಿಲ್ಲಿ ಮುಚ್ಚಿ | ವೆಳಕಿಲ್ಲ ಮುಗಿಲು ಮುಚ್ಚಿ |
| 16 | 3 | 3 | ಸಂಘುದ | ಸಂಪದ |
| 17 | 2 | 6 | ಗುಣವೇತಕೆ | ಗುಣಗಣವೇತಕೆ |
| 18 | 3 | 4 | ಯೆದೆ | ಎದೆ |
| 19 | 6 | 1 | ವದ್ಯಂ | ವಧ್ಯಂ |
| 19 | 6 | 2 | ಳಿಡೆಗೆಡದೆ | ಳಿದೆಗೆಡದೆ |
| 21 | 5 | 2 | ದುಡಿದು ಮಡಿದು | ನಿರತ ದುಡಿದು |

| ಪುಟ | ಪದ್ಯ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|---|
| 22 | 1 | 3 | ತೋಡುತಿದೆ | ಕೋಡುತಿದೆ |
| 22 | 4 | 3 | ತಿಳಿಯುಲಪ್ಪುದೆನೆ | ತಿಳಿಯುಪ್ಪುದೆನೆ |
| 25 | 5 | 2 | ವಾಸಿ | ಘಾಸಿ |
| 25 | 8 | 4 | ಸ್ವಾತಂತ್ರ್ಯಸಿರಿ | ಸ್ವಾತಂತ್ರ್ಯವೀರಸಿರಿ |
| 26 | 3 | 3 | ಒಲುವೆಯಿಲ್ಲ | ಒಲುಮೆಯಿಲ್ಲ |
| 26 | 11 | 4 | ಬುದಾ | ಬುದ್ಧಾ |
| 27 | 6 | 4 | ವರಿಯೆ? | ಸರಿಯೆ? |
| 28 | — | 5 | ನೆರೆಗೈದಿಹರು | ಸೆರೆಗೈದಿಹರು |
| 28 | — | 7 | ನುಡಿಯೆವರವ | ನುಡಿಯುಲವರ |
| 28 | — | 15 | ಪಾಪ | ಶಾಪ |
| 28 | — | 17 | ಪಾಂಡುಪುತ್ರ | ಪಾಂಡುರಾಜ |
| 30 | — | 17 | ನೆನಪಾಗ | ನೆನಸಾಗ |
| 31 | 2 | 4 | ಹೇಳವ್ವ | ಹೇಳಪ್ಪ |
| 31 | 4 | 2 | ಕುರುಹು | ಕುರುಹ |
| 34 | 3 | 1 | ಶೃದ್ಧೆ | ಶ್ರದ್ಧೆ |
| 34 | 3 | 5 | ಯುರಿವುದು | ಯ್ಯುರಿವುದು |
| 34 | 3 | 6 | ನನೆ | ನೆನೆ |
| 35 | 1 | 3 | ಕೆಗಳುವ | ತೆಗಳುವ |
| 38 | 1 | 3 | ತಾತ್ಮ | ವಾತ್ಮ |
| 38 | 2 | 3 | ಪ್ರೇಮ ಧರ್ಮ | ಪ್ರೇಮದ ಧರ್ಮ |
| 39 | 3 | 6 | ತರುಣ | ಕರುಣ |
| 40 | 5 | 4 | ಬೇರೆಯುರಿಯ | ಬೇರರಿಯ |
| 42 | 11 | 4 | ತಿಹದು | ತಿಹುದು |
| 43 | 13 | 3 | ಹೆತ್ತಾರು | ಹತ್ತಾರು |
| 45 | 27 | 3 | ರಸವನುಣಿಸಿದರು | ರಸವಕುಡಿಸಿದರು |
| 46 | 28 | 2 | ಧರ್ಮಸ್ಥಳ | ಧರ್ಮಸ್ಥಳವ |
| 46 | 28 | 3 | ಹಂಬಲಗಳಾಂತು | ಹಂಬಲಗಳಾರಿತು |
| 47 | 34 | 2 | ಮುಗಿಲಿನ | ಮುಗುಳಿನ |
| 47 | 35 | 4 | ಭಾಷ್ಪ | ಬಾಷ್ಪ |
| 47 | 37 | 3 | ಸತ್ಪುರುಷ | ಸತ್ಪುರುಷರಿಗೆ |

